# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಒಳ್ಳೆಯತನಕ್ಕೆ ಅಪೂರ್ವವಾದೊಂದು ಶಕ್ತಿಯಿರುತ್ತದೆ. ಅದು ಕಠಿಣಾತ್ಮರನ್ನೂ, ದುರಾಶಾಪರರನ್ನೂ, ದುಷ್ಟರನ್ನೂ ಕೆರಳಿಸುವುದಕ್ಕೆ ಬದಲಾಗಿ ಕನಿಕರಕ್ಕೂ, ವಿನೋದಕ್ಕೂ ಪ್ರೇರೇಪಿಸಿ, ಅವರ ಕ್ರೂರತನವನ್ನು ಸೌಮ್ಯಗೊಳಿಸಿ ಬಿಡುವಂತಹುದು. ಕಡೆಗೆ ಆ ಒಳ್ಳೆಯವನಿಗುಂಟಾದ ಸಹಜ ಕೋರಿಕೆ ಎಷ್ಟು ಮಾತ್ರಕ್ಕೂ ನಡೆಯುವಂತಹುದಲ್ಲದುದಾದರೂ. ನಡೆದು ಬಿಡುವುದನ್ನು ಈ ಸಂಚಿಕೆಯ ಬೇತಾಳವು ಹೇಳುವ ಕಥೆ "ಪದ್ಮನಾಭನ ಮದುವೆ" ಯಲ್ಲಿ ನೋಡಬಹುದು.

## ಅಮರವಾಣಿ

ವಸಂತೇ ಜ್ಞಾಯತೇ ಭೇದಃ ಕಾಕಸ್ಯ ಚ ಪಿಕಸ್ಯ ಚ
ಸತಶ್ಚಾ ವ್ಯಸತೋಃ ಭೇದಃ ಸಮಯೇ ಏವ ಜ್ಞಾಯತೇ

ಕಾಗೆಯೂ ಕೋಗಿಲೆಯೂ ಒಂದೇ ರೀತಿಯಲ್ಲಿ ಕಾಣುತ್ತವೆ. ಆದರೆ ವಸಂತರ್ತುವಿನಲ್ಲಿ ಅವುಗಳ ಭೇದ ತಿಳಿಯುತ್ತದೆ. ಉತ್ತಮನೂ, ಅಧಮನೂ ಒಂದೇ ರೀತಿಯಲ್ಲಿದ್ದರೂ, ಅಗತ್ಯ ಬಂದಾಗ ಅವರೊಳಗಿನ ಭೇದ ಗೊತ್ತಾಗುತ್ತದೆ.

ಸಂಪುಟ : ೭೨ ಫೆಬ್ರವರಿ '೮೪ ಸಂಚಿಕೆ : ೨

ಬಿಡಿ ಪ್ರತಿ ರೂ. ೧-೦೦ :: ವಾರ್ಷಿಕ ಚಂದಾ ರೂ. ೧೪-೦೦




SANKAR

# ಚಂದಮಾಮನ ಹರಟೆ



## ಆಜ್ಞೆ ಪಾಲಿಸುವ ಹಡಗು

ಜಪಾನಿಗೆ ಸೇರಿದ ಕಿನೋಕಾವಾಮಾರೂ ಎಂಬ ಹಡಗು ನಾವಿಕನು "ಹೋಗು" ಎಂದರೆ ಮುಂದೆ ಹೋಗುತ್ತದೆ. "ನಿಲ್ಲು" ಎಂದರೆ ನಿಂತುಬಿಡುತ್ತದೆ. ಪ್ರಪಂಚದಲ್ಲೇ ಮೊತ್ತಮೊದಲನೇದಾಗಿ ಮಾತಿನಿಂದಲೇ ನಿಯಂತ್ರಿಸಬಲ್ಲ ಯಂತ್ರವನ್ನು ಅಳವಡಿಸಿದ ಈ ಹಡಗಿನಲ್ಲಿ, ನಾವಿಕನ ಆಜ್ಞೆಯನ್ನು ಕೇಳಿ, ಅದರಂತೆ ಹಡಗನ್ನು ನಡೆಸಲು ಇಂಜನ್ ಕೋಣೆಯಲ್ಲಿ ಇಂಜಿನೀರು ಇಲ್ಲ. ಆದರೆ ಆ ಸ್ಥಾನದಲ್ಲಿ ಕಂಪ್ಯೂಟರ್ ಇರುತ್ತದೆ.

## ಸೌರಶಕ್ತಿಯಿಂದ ವಿದ್ಯುಚ್ಛಕ್ತಿ



ಕಾಲಿಫೋರ್ನಿಯಾದ 'ಸೋಲಾರ್ ಒನ್' ಎಂಬ ಪ್ರಯೋಗ ಶಾಲೆಯಲ್ಲಿ ೧೯೮೮ ನೇ ಇಸವಿಯ ಕಾಲಕ್ಕೆ, ಬ್ರಹ್ಮಾಂಡದಂತಹ ಹದಿನೈದು ಸಾವಿರ ಕನ್ನಡಿಗಳ ಮೂಲಕ ಸೂರ್ಯಕಾಂತಿಯನ್ನು ಮರುಭೂಮಿಯ ಉಪ್ಪಿನ ಸರೋವರದ ಮೇಲೆ ಪಸರಿಸುವಂತೆ ಮಾಡಲಾಗುತ್ತದೆ, ಇದರಿಂದ ಐವತ್ತು ಸಾವಿರ ಮನೆಗಳಿಗೆ ಸರಿಹೋಗುವ ವಿದ್ಯುಚ್ಛಕ್ತಿ ಉತ್ಪತ್ತಿಯಾಗಬಲ್ಲುದೆಂದು "ಸೈನ್ಸ್ ಡೈಜೆಸ್ಟ್" ಪತ್ರಿಕೆ ತಿಳಿಸುತ್ತದೆ.



## ಪ್ರಪಂಚದಲ್ಲೇ ದೊಡ್ಡ ಪುಷ್ಪಹಾರ

ಜಮೈಕಾ (ಅಮೆರಿಕಾ)ದಲ್ಲಿ ಪ್ರಸಿದ್ಧನಾದ ಭಾರತೀಯ ಯೋಗಿ ಚಿನ್ಮಯ್ ಹತ್ತು ಸಾವಿರ ಗೀತೆಗಳನ್ನು ಪೂರ್ತಿಮಾಡಿದ ಸಂದರ್ಭದಲ್ಲಿ, ಆತನಿಗೆ ಒಂದು ದೊಡ್ಡ ಪುಷ್ಪಹಾರ ಸಮರ್ಪಿಸಿದರು. ಹತ್ತು ಸಾವಿರ ಹೂಗಳಿಂದ ಹೆಣೆದ ಈ ಪುಷ್ಪಹಾರವೇ ಪ್ರಪಂಚದೊಳಗೆಲ್ಲಾ ದೊಡ್ಡ ಹಾರವೆಂದು ಹೇಳುತ್ತಾರೆ. ಯೋಗಿ ಚಿನ್ಮಯ್ ಪಾಂಡಿಚ್ಚೇರಿಯ ಶ್ರೀ ಅರವಿಂದಾಶ್ರಮದಲ್ಲಿ ಶಿಕ್ಷಣ ಪಡೆದವನು.

## ನಿಮಗೆ ಗೊತ್ತೇ?

೧. ಭೂಗರ್ಭದಲ್ಲಿ ಪ್ರಪಂಚದಲ್ಲೇ ಬಲು ದೊಡ್ಡದಾದ ಗುಹೆಗಳು ಎಲ್ಲಿವೆ ?

೨. ದೊಡ್ಡ ದೊಡ್ಡ ಹಿಮಗಡ್ಡೆಗಳು ಪ್ರಪಂಚದಲ್ಲಿ ಯಾವಯಾವ ಪ್ರಾಂತಗಳಲ್ಲಿ ಕಾಣುತ್ತವೆ?

೩. ಪ್ರಪಂಚದೊಳಗೆಲ್ಲಾ ಎತ್ತರವಾದ ಜಲಪಾತವು ಎಲ್ಲಿದೆಯೋ ನಿಮಗೆ ಗೊತ್ತೇ ?

೪. ಪ್ರಪಂಚದೊಳಗೆಲ್ಲಾ ದೊಡ್ಡ ಅಗ್ನಿ ಪರ್ವತವು ಎಲ್ಲಿರುವುದೆಂದು ಹೇಳಬಲ್ಲಿರಾ ?

೫. ವಿಸ್ತಾರ ಬಿಂಬದಲ್ಲಿ ಅತಿ ದೊಡ್ಡದಾದ ಕೃತ್ರಿಮ ಸರೋವರವು ಎಲ್ಲಿದೆ ?

(ಉತ್ತರ ೬೪ ನೇ ಪುಟದಲ್ಲಿ)




ಒಂದಾನೊಂದು ಊರಿನಲ್ಲಿ ಸೋಮಯ್ಯನೆಂಬವನಿಗೆ ಇಪ್ಪತ್ತೈದು ವರ್ಷ ವಯಸ್ಸಾಗುವಾಗ, ಇದ್ದಕ್ಕಿದ್ದ ಹಾಗೆ ಶರೀರವು ದಪ್ಪವಾಗಲು ಪ್ರಾರಂಭವಾಯಿತು. ಕಡೆಗೆ ಅವನು ಎಷ್ಟು ದಪ್ಪದ ಮನುಷ್ಯನಾದನೆಂದರೆ, ಅವನನ್ನು ನೋಡಿದ ಜನರು, ಅವನೇನಾದರೂ ಅಂದುಕೊಳ್ಳುವನೆಂಬ ಗೊಡವೆ ಬಿಟ್ಟು ಅವನ ಇದಿರಿನಲ್ಲೇ ನಕ್ಕುಬಿಡುತ್ತಿದ್ದರು, ಉಕ್ಕಿ ಬರುವ ನಗುವನ್ನು ತಾಳಲಾಗದೆ !

ಇದರಿಂದ ಚಿಂತಿತನಾದ ಸೋಮಯ್ಯನು ವೈದ್ಯನ ಬಳಿಗೆ ಹೋಗಿ ತನ್ನ ತೋರವಾದ ಶರೀರವು ತಗ್ಗುವಂತೆ ಏನಾದರೂ ಉಪಾಯವಿದ್ದರೆ ಹೇಳಬೇಕೆಂದು ಕೇಳಿದನು. ದಿನಾ ಒಂದು ಹರದಾರಿ ದೂರದವರೆಗೆ ಎಲ್ಲಿಯೂ ನಿಲ್ಲದೆ ಓಡಬೇಕು, ಹಾಗೆ ಮಾಡಿದರೆ ಒಂದು ತಿಂಗಳಲ್ಲಿ ಸಣ್ಣಗಾಗುವಿ" ಎಂದನು ವೈದ್ಯ.

ಒಂದು ಹರದಾರಿ ದೂರವೆಂದರೆ ಎಲ್ಲರೂ ನಡೆಯುವ ಬೀದಿಯಲ್ಲೇ ಓಡಬೇಕಿತ್ತು. ಸೋಮಯ್ಯ ಒಂದು ದಿನ ಹಾಗೆಯೇ ಓಡಲು ಪ್ರಾರಂಭಿಸಿದನು. ದಾರಿಯುದ್ಧಕ್ಕೂ ಅವನಿಗೆ ಜನರು ಇದಿರಾದರು. ಅವನು ಓಡುವ ಚಂದವನ್ನು ನೋಡಿ ಅನೇಕರಿಗೆ ನಗುವೂ ಬಂದಿತು. ಹಾಗೆ ನಕ್ಕವರಲ್ಲಿ ಒಬ್ಬನು ಕುತೂಹಲವನ್ನು ತಾಳಲಾಗದೆ ಸೋಮಯ್ಯನನ್ನು "ಏಕೆ ಹೀಗೆ ಓಡುವಿಯಪ್ಪಾ ?" ಎಂದು ಕೇಳಿ ತುಸುದೂರ ಅವನೊಂದಿಗೆ ಓಡುತ್ತಾ ಸಂಗತಿಯನ್ನು ತಿಳಿದುಕೊಂಡನು. ಮರುದಿನ ಸೋಮಯ್ಯನಿಗೆ ನಿನ್ನೆಗಿಂತ ಹೆಚ್ಚಿಗೆ ಜನರು ಅವನು ಓಡುವುದನ್ನು ನೋಡಲಿಕ್ಕೇ ನಿಂತವರ ಹಾಗೆ ಬಂದಿರುವುದು ಕಾಣಿಸಿತು.

ಇದರಿಂದ ನಾಚಿಕೊಂಡ ಸೊಮಯ್ಯನು ಬೆಳಗಾಗುವುದಕ್ಕೆ ಮೊದಲೇ ಓಟದ ವೈದ್ಯಮಾಡಿ ಮುಗಿಸಬೇಕೆಂದುಕೊಂಡನು. ಹಾಗೆಯೇ ಮಾಡಿದಾಗ ಒಬ್ಬಿಬ್ಬರು ದಾರಿಯಲ್ಲಿ ಕಂಡರೂ, ಮೊದಲಿನ ಹಾಗೆ ನಗುವವರು ಹೆಚ್ಚು ಮಂದಿ ಕಾಣಲಿಲ್ಲ. ಅಷ್ಟು ಬೆಳಂಜಾವದಲ್ಲಿ ಹಾಸಿಗೆ ಬಿಟ್ಟೇಳುವುದೆಂದರೆ ಬಹಳ ಸಂಕಟವಾಗಿತ್ತು. ಆ ಸಮಯದಲ್ಲಿ ಬರುವ ಗಾಢವಾದ ಸವಿನಿದ್ದೆಯನ್ನು ಬಿಡಲು ಅವನಿಗೆ ಮನಸ್ಸಿಲ್ಲ.

ಆದುದರಿಂದ ಅವನು ಮತ್ತೆ ವೈದ್ಯನ ಬಳಿಗೆ ಹೋಗಿ, "ಓಡುವುದು ನನ್ನಿಂದಾಗದು ಸ್ವಾಮಿ. ಅದಕ್ಕಿಂತ ಸುಲಭವಾದ ಬೇರೆ ಉಪಾಯವಿದ್ದರೆ



ದಯಮಾಡಿ ಹೇಳಿರಿ" ಎಂದು ಕೇಳಿಕೊಂಡನು.

"ಅದಕ್ಕೇನು, ಇನ್ನೊಂದಿದೆ. ನೀನು ಆಹಾರವನ್ನು ಮಿತವಾಗಿ ತೆಗೆದುಕೋ. ದಿನಾ ಒಂದು ಲೋಟ ಹಾಲು, ಒಂದು ಲೋಟ ಹಣ್ಣಿನ ರಸ, ನಿಂಬೆಕಾಯಿಯಷ್ಟೇ ಮಜ್ಜಿಗೆಯನ್ನ ಇಷ್ಟೇ ಸಾಕು. ಹೀಗೆ ಮಾಡಿದಿಯೆಂದರೆ ಎರಡು ತಿಂಗಳಲ್ಲಿ ನಿನ್ನ ಸ್ಥೂಲತೆ ಕರಗಿ ಹೋಗುತ್ತದೆ" ಎಂದನು ವೈದ್ಯ.

ಸೋಮಯ್ಯನು ವೈದ್ಯನು ಹೇಳಿದ ಹಾಗೆಯೇ ಎರಡು ದಿನ ಮಾಡಿದನು. ಆ ಎರಡು ದಿನಗಳಲ್ಲೇ ಅವನಿಗೆ ವಿಪರೀತವಾಗಿ ಆಯಾಸ ಬಂದು ಬಿಟ್ಟಿತು. ತಿಂಡಿಗಾಗಿ ಬಾಯಿ ಮೂಕರೋದನೆಗೆ ತೊಡಗಿತು. ಶರೀರವು ಸ್ವಲ್ಪ ಸೊರಗಿದ ಮಾತು ನಿಜವೇ. ಆದರೆ ಸೋಮಯ್ಯನು ಮೂರನೇ ದಿನ ಬಾಯಿ ಕಟ್ಟು ತಾಳಲಾಗದೆ ಎಂದಿನಂತೆ ಹೊಟ್ಟೆ ತುಂಬ ಭೋಜನ ಮಾಡಿಯೇ ಬಿಟ್ಟನು. ಮತ್ತೆ ಅವನ ಶರೀರ ಮೊದಲಿನಂತೆ ದಪ್ಪವೂ ಆಯಿತು.

ಸೋಮಯ್ಯ ಕೂಡಲೇ ವೈದ್ಯನ ಬಳಿಗೆ ಹೋಗಿ, "ಎರಡು ದಿನ ನೀವು ಹೇಳಿದ ಹಾಗೆಯೇ ಮಿತವಾಗಿ ತಿಂದು ನೋಡಿದೆ. ಸೊರಗಿ ಹೋದುದೂ ನಿಜ. ಮೂರನೇ ದಿನ ತಾಳಲಾಗಲಿಲ್ಲವಯ್ಯ. ಎಂದಿನಂತೆ ಊಟಮಾಡಿದೆ. ಮತ್ತೆ ಮೊದಲಿನ ಹಾಗೇ ದಪ್ಪವೂ ಆದೆ. ಹೀಗಾದರೆ ಹೇಗೆ ಸ್ವಾಮಿ? ಪೂರ್ತಿ ಸೊರಗಿ, ಹಾಗೆಯೇ ಇರಬೇಕಾದರೆ ಎಷ್ಟು ದಿನ ಮಿತಾಹಾರದಿಂದ ಹಸಿವೆ ತಾಳಿಕೊಂಡಿರಲಿ ?" ಎಂದು ಕೇಳಿದನು.

"ಎಷ್ಟು ದಿನವೆಂದರೇನು? ನೀನು ಸೊರಗಿದ ಮೇಲೆಯೂ ಬದುಕಿರುವಷ್ಟು ಕಾಲದವರೆಗೂ ಹಾಗೆ ಮಿತಾಹಾರದಲ್ಲೇ ಇರಬೇಕು. ಯಾವಾಗ ಮಾಮೂಲಿನಂತೆ ಉಣ್ಣಲು ತೊಡಗುವೆಯೋ ಆಗಿನಿಂದ ಮತ್ತೆ ದಪ್ಪವಾಗುತ್ತಾ ಹೋಗುವಿ. ನಿನ್ನ ಶರೀರತತ್ವವೇ ಹಾಗೆ" ಎಂದನು ವೈದ್ಯ.

"ಬದುಕಿರುವಷ್ಟು ಕಾಲವೂ ಹೀಗೆ ಮಿತಾಹಾರವೆಂದರೆ ನಾನು ಬೇಗನೇ ಸತ್ತು ಹೋದೇನು. ಇಂಥಾದ್ದು ಸಾಧ್ಯವೇ ಇಲ್ಲ. ಬೇರೇನಾದರೂ ಉಪಾಯವಿದ್ದರೆ ಹೇಳಿರಿ ಸ್ವಾಮಿ" ಎಂದು ಸೋಮಯ್ಯ ಅಂಗಲಾಚಿಕೊಂಡನು.

"ನನ್ನ ಹತ್ತಿರ ಒಂದು ಔಷಧಿ ಇದೆ. ಅದನ್ನು ಉಫಯೋಗಿಸಿ ನೋಡು. ಮಿತಾಹಾರದ ಗೊಡವೆ ಇದಕ್ಕೇನಿಲ್ಲ" ಎಂದು ವೈದ್ಯನು ಸೋಮಯ್ಯನಿಗೆ ಹತ್ತು ಗುಳಿಗೆಗಳನ್ನು ಕೊಟ್ಟು, ದಿನಾ ಒಂದೊಂದರಂತೆ ಬೆಳಿಗ್ಗೆ ನುಂಗಲು ಹೇಳಿದನು.

ಮರುದಿನ ಬೆಳಿಗ್ಗೆ ಸೋಮಯ್ಯ ಒಂದು ಗುಳಿಗೆ ನುಂಗಿದನು. ಕುತ್ತಿಗೆಯೊಳಗೆ ಭಗಭಗವೆಂದಿತು. ನಾಲಗೆಯಲ್ಲಿಯೂ ಕರಕರ ಉರಿ ತೋರಿತು. ಆ ದಿನವಿಡೀ ಅವನು ಏನನ್ನೂ ತಿನ್ನಲಾಗದೆ ಹೋದನು. ಗುಳಿಗೆಯಲ್ಲಿ ಬಲವರ್ಧಕವಾದ ಆಹಾರವೇನೋ ಇದ್ದಿರಬೇಕು. ಅವನಿಗೆ ಹಸಿವಿನ ಸಂಕಟವೇನೂ

ಗೊತ್ತಾಗಲಿಲ್ಲ. ಬೇರೆ ತೊಂದರೆಗಳೂ ಆಗಲಿಲ್ಲ. ಮರುದಿನ ಸೋಮಯ್ಯನಿಗೆ ನಾಲಗೆಯ ಉರಿ ಸ್ವಲ್ಪ ತಗ್ಗಿದ ಹಾಗೆ ತೋರಿತು. ಆದರೆ ಮತ್ತೆ ಗುಳಿಗೆ ನುಂಗಿದ ಕೂಡಲೇ ಯಥಾ ಪ್ರಕಾರ ನಾಲಗೆಯೂ, ಕುತ್ತಿಗೆಯೊಳಗೂ ಉರಿ ಎದ್ದಿತು. ಆ ದಿನ ಕೂಡಾ ಅವನೇನೂ ತಿನ್ನಲಿಲ್ಲ. ಇದೊಂದು ಅಸಂತೃಪ್ತಿಯ ವಿಷಯವಾದರೂ ಸೋಮಯ್ಯನು ವೈದ್ಯನು ಕೊಟ್ಟ ಗುಳಿಗೆಗಳನ್ನೆಲ್ಲ ನುಂಗಿಬಿಡುವುದೆಂದೇ ನಿಶ್ಚಯಿಸಿಕೊಂಡನು. ಹಸಿವೆಯ ಕಾಟವಂತೂ ಇಲ್ಲವಷ್ಟೆ?



ಆ ದಿನ ರಾತ್ರಿ ಸೋಮಯ್ಯನ ಮನೆಗೆ ದಾರಿಹೋಕನಾದ ಕುಳ್ಳನೊಬ್ಬನು ಬಂದನು. ಅವನು ನೆರೆಯ ಊರಿಗೆ ಹೋಗುತ್ತಾ, ಜಡಿ ಮಳೆಯ ಕಾರಣದಿಂದ ಸೋಮಯ್ಯನ ಮನೆಯಲ್ಲಿ ಆಶ್ರಯ ಕೇಳಿದನು. ಸೋಮಯ್ಯನು ಅವನಿಗೆ ಮರ್ಯಾದೆ ಮಾಡಿ ಆತಿಥ್ಯವಿತ್ತು ಭೋಜನ ಹಾಕಿಸಿದನು. ಆದರೆ ಅವನ ಜತೆಯಲ್ಲಿ ತಾನು ಮಾತ್ರ ಭೋಜನ ಮಾಡಲಿಲ್ಲ.

"ನೀವು ಬಹಳ ಒಳ್ಳೆಯವರು. ಇಷ್ಟೊಂದು ಆದರಣೆಯನ್ನೂ, ಆತಿಥ್ಯವನ್ನೂ ನನಗೆ ಯಾರೂ ಕೊಟ್ಟದ್ದಿಲ್ಲ. ಆದರೆ ನನ್ನೊಂದಿಗೆ ನೀವು ಮಾತ್ರ ಭೋಜನ ಮಾಡದೆ ಸುಮ್ಮನಿದ್ದುದು ನನಗೆ ಖೇದವಾಗಿದೆ" ಎಂದನು ಕುಳ್ಳ.

ಆದನ್ನು ಕೇಳಿ ಸೋಮಯ್ಯನು ತನ್ನ ಕಥೆಯನ್ನೆಲ್ಲಾ ಆ ಕುಳ್ಳನೊಂದಿಗೆ ಹೇಳಿದನು.

ಅದನ್ನೆಲ್ಲ ಕೇಳಿ ಕುಳ್ಳನು, "ನಿಮ್ಮ ಸಂಗತಿ ಸರಿಯೆ. ನೀವು ಈ ಬಗೆಯ ಕ್ರಮದಲ್ಲಿ ಸಣ್ಣಗಾಗುವಿರೆನ್ನೋಣ. ಆದರೆ ನನ್ನ ಸಂಗತಿ ನೋಡಿದಿರಾ? ನನ್ನನ್ನು ಎತ್ತರದ ಶರೀರಿಯಾಗಿ ಮಾಡತಕ್ಕ ವೈದ್ಯವೇ ಇಲ್ಲ. ಎಲ್ಲರೂ ನನ್ನ ಕುಳ್ಳತನವನ್ನು ನೋಡಿ ನಗುತ್ತಾರೆ. ಅದಕ್ಕಾಗಿ ನಾನೇನು ಮಾಡಲಿ ಹೇಳಿರಿ, ನೋಡೋಣ" ಎಂದು ಕೇಳಿದನು.

"ಹೌದು ಪಾಪ! ನಿಮ್ಮದು ನನಗಿಂತಲೂ ಪರಮ ದೀನಸ್ಥಿತಿಯೇ ನಿಜ" ಎಂದನು ಸೋಮಯ್ಯ ಕನಿಕರದಿಂದ.

"ಹಾಗಲ್ಲ, ಪರಮ ದೀನಸ್ಥಿತಿ ನನ್ನದೇನಲ್ಲ, ಅದು ನಿಮ್ಮದೇ ಎಂದು ನನ್ನ ಅಭಿಪ್ರಾಯ" ಎಂದನು ಕುಳ್ಳ ನಗುತ್ತ.

"ಅದು ಹೇಗೆ?" ಎಂದನು ಸೋಮಯ್ಯ ಅತ್ಯಾಶ್ಚರ್ಯದಿಂದ.

"ನೀವು ದಪ್ಪ ಶರೀರದವರಾಗಿರುವುದರಿಂದ ನಿಮಗೆ ಬಂದ ನಷ್ಟವೇನಿದೆ? ಎಲ್ಲಾ ಕಾರ್ಯಗಳನ್ನೂ ಸರಿಯಾಗಿಯೇ ಮಾಡಿಕೊಂಡು ಹೋಗುವಿರಿ, ನಿಮ್ಮನ್ನು ನೋಡಿ ಜನರು ನಗುತ್ತಾರೆಂದು, ಸೊರಗಬೇಕೆಂದು ಪಾಡುಪಡುವಿರಿ. ಅಂದರೆ, ನಿಮ್ಮನ್ನು ನೋಡಿ ನಗುವವರಿಗಾಗಿಯೇ ನೀವು ಶ್ರಮಪಡುವಿರೆಂದಾಯಿತು. ಇದು ನಿಮ್ಮ ದೀನಸ್ಥಿತಿ

ಯಲ್ಲದೆ ಮತ್ತೇನು ಹೇಳಿ ?" ಎಂದನು ಕುಳ್ಳ. "ಹಾಗಾದರೆ ನಿಮ್ಮನ್ನು ನೋಡಿ ಯಾರಾದರೂ ನಕ್ಕರೆ ನಿಮಗೇನೂ ಸಂಕಟವಾಗುವುದಿಲ್ಲವೆ ?" ಎಂದು ಸೋಮಯ್ಯನು ಕೇಳಿದನು.

"ನೀವು ದಾಕ್ಷಿಣ್ಯವೇನಿಲ್ಲದೆ ಒಂದು ಮಾತು ಹೇಳಿರಿ. ನನ್ನ ಆಕಾರ ನೋಡಿ ಅನೇಕರು ನಗುತ್ತಾರೆಂದಿರಿ. ಅವರ ಹಾಗೆಯೇ ನಿದುಗೂ ನಗು ಬಂದಿದೆ ಹೌದಾ ? ನನ್ನ ಮುಂದೆ ತೋರಿಸಲಿಲ್ಲವೆಂಬ ದೂತು ಬೇರೆ" ಎಂದನು ಕುಳ್ಳ,

ಸೋಮಯ್ಯನು ಆ . ಮಾತು ನಿಜವೇ ಎಂದು ಒಪ್ಪಿಕೊಂಡನು.

"ಹಾಗೆಯೇ ನಿಮ್ಮ ಸ್ಥೂಲಾಕಾರ ನೋಡಿ ನಗುವವರಲ್ಲಿ ನಾನೂ ಒಬ್ಬನೆಂಬುದು ನಿಜವಷ್ಟೆ ? ಹೌದೆನ್ನುವಿರಾ ?" ಎಂದನು ಕುಳ್ಳ,

"ಅದೂ ನಿಜವೇ. ಹಾಗೆಯೇ ಹೌದು. ನಿಮ್ಮ ಆಕಾರ ನೋಡಿ ನಾನು ನಗುತ್ತೇನೆ. ನನ್ನ ಆಕಾರ ನೋಡಿ ನೀವು ನಗುವುದೂ ಸಹಜವೇ" ಎಂದನು ಸೋಮಯ್ಯ.

"ಇದೇ ನಿಜ ಸಂಗತಿ ! ಈ ವಿಷಯದಲ್ಲಿ ನಾನೂ ನೀವೂ ಏಕಮತದಲ್ಲೇ ಹೇಳಿಕೊಳ್ಳೋಣ. ಈಗ ನಮ್ಮಿಬ್ಬರ ಸಮಸ್ಯೆಯೂ ಒಂದೇ. ನಿನ್ನ ಸಮಸ್ಯೆಗೆ ಸುಲಭವಾದ ಮಾರ್ಗ ಹೇಳುತ್ತೇನೆ ಕೇಳು. ಯಾರಾದರೂ ನಿನ್ನನ್ನು ನೋಡಿ ನಕ್ಕರೆಂದುಕೋ. ಆಗ ನೀನೇ ನಾನು ಅಂದುಕೋ. ನನ್ನನ್ನು ನೋಡಿ ಯಾರಾದರೂ ನಕ್ಕಾಗ ನಾನೇ ನೀನು ಅಂದುಕೊಳ್ಳುತ್ತೇನೆ. ಇನ್ನು ಸಂಕಟವೇನು ಬಂತು ?" ಎಂದನು ಕುಳ್ಳ ನಗುತ್ತಾ.

ಕುಳ್ಳನ ಮಾತಿನಲ್ಲಿ ಬಹು ದೊಡ್ಡ ನಿಜವಿರುವುದೆಂದು ಸೋಮಯ್ಯನಿಗೆ ತೋರಿತು. ಆರೋಗ್ಯವು ಚೆನ್ನಾಗಿಯೇ ಇರುವಾಗ ಯಾರೋ ನೋಡಿ ನಗುವರೆಂದುಕೊಂಡು ನಮ್ಮ ಶರೀರವನ್ನು ನೋಯಿಸಿಕೊಳ್ಳಬೇಕೇಕೆ ? ಆಹಾರ ಪಾನೀಯಗಳಲ್ಲಿರುವ ಇಷ್ಟವನ್ನು ಬಲವಂತವಾಗಿ ಅಡಗಿಸಿಡಬೇಕೇಕೆ ?

ಸೋಮಯ್ಯನು ಕುಳ್ಳನಿಗೆ ನಮಸ್ಕಾರ ಮಾಡಿ, "ನಿಮಗೆ ಆತಿಥ್ಯವಿತ್ತುದರಿಂದ ನನಗೆ ಒಳ್ಳೆಯದೇ ಆಯಿತು. ನೀವು ಮಹಾಜ್ಞಾನಿಯ ಹಾಗೆ ಹಿತ ಬೋಧೆ ಮಾಡಿದಿರಿ. ಇನ್ನು ನನಗೆ ಯಾವ ಸಮಸ್ಯೆಯೂ ಇಲ್ಲ" ಎಂದನು,

ಆಮೇಲೆ ಸೋಮಯ್ಯನ ದಪ್ಪವು ತಗ್ಗಲಿಲ್ಲವಾದರೂ ಅವನನ್ನು ನೋಡಿ ನಗುವ ಜನರು ಕ್ರಮವಾಗಿ ತಗ್ಗಿ ಹೋದರು. ಇದಿರಾಳಿಗೆ ಏನೂ ನೋವು ಅನಿಸದಿದ್ದಲ್ಲಿ ಹಾಗೆ ನಗುವುದರಲ್ಲಿ ಯಾರಿಗೂ ಇಷ್ಟವಿರದು. ಒಂದು ವೇಳೆ ನಕ್ಕರೂ ನಗುವವರಿಗೇ ನೋವು, ಅಷ್ಟೇ.





# ಪದ್ಮನಾಭನ ಮದುವೆ

ಕಿತ್ತುಕಿತ್ತಂತೆ ಮತ್ತೆ ಮತ್ತೆ ಚಿಗುರು ಬಿಡುವ ಗಿಡದಂತೆ ಉತ್ಸಾಹ ಚಿಗುರಿಕೊಂಡಿರುವ ರಾಜಾ ತ್ರಿವಿಕ್ರಮನು ಸೀದಾ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿರುವ ಶವವನ್ನು ಕೆಳಗಿಳಿಸಿ ತನ್ನ ಭುಜಸ್ಕಂಧದ ಮೇಲೆ ಹಾಕಿಕೊಂಡು ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ ! ಪ್ರಾರಂಭಿಸಿದ ಕಾರ್ಯವನ್ನು ಎಷ್ಟೇ ಕಷ್ಟಗಳು ಬಂದರೂ ಮಾಡಿ ಮುಗಿಸಬೇಕೆಂಬ ನಿನ್ನ ಹಟವು ಮೆಚ್ಚತಕ್ಕದ್ದೇ ಸರಿ. ಆದರೆ ದುಸ್ಸಾಧ್ಯವಾದ ಇಂತಹ ಕಾರ್ಯಕ್ಕೆ ನಿನ್ನನ್ನು ಹುರಿದುಂಬಿಸಿದವನು ಬಹುಶಃ ನಿನ್ನೊಂದಿಗೆ ಮಿತ್ರನಂತೆ ನಟಿಸುವ ಶತ್ರುವಾಗಿರಬೇಕೆಂದೇ ನನ್ನ ಅನುಮಾನ. ಧೈರ್ಯ ಸಾಹಸಗಳೂ, ಬುದ್ಧಿವಂತಿಕೆಗಳೂ ಇರುವವರು ಸಾಧಿಸಲಾಗದ ಕೆಲವು ಕಾರ್ಯಗಳನ್ನು ಮುಗ್ಧ ಸ್ವಭಾವದ ಅಮಾಯಕರು ಒಳ್ಳೆಯ ಬುದ್ಧಿಯೊಂದಿದ್ದರೆ ಸುಲಭವಾಗಿ ಸಾಧಿಸಿಬಿಡಬಲ್ಲರು. ಇದಕ್ಕೆ ಉದಾಹರಣೆಯಾಗಿ ನಿನಗೆ ನಿನ್ನಂತೆಯೇ ಹಟಗಾರನಾದ ಪದ್ಮ

## ಬೇತಾಳ ಕಥೆಗಳು



ನಾಭನೆಂಬವನ ಕಥೆ ಹೇಳುತ್ತೇನೆ. ಕೇಳುತ್ತಾ ನಡೆಯುವಾಗ ನನ್ನನ್ನು ಹೊತ್ತುಕೊಂಡು ನಡೆಯುವ ನಿನ್ನ ಶ್ರಮವು ಕಡಿಮೆಯಾಗುತ್ತದೆ. ಕೇಳು" ಎಂದು ಕಥೆಯನ್ನು ಹೇಳತೊಡಗಿತು:

ಪದ್ಮನಾಭನೆಂಬ ಆ ಯುವಕನು ಕುಮುದವತಿ ಎಂಬ ನಗರದಲ್ಲಿ ವಾಸವಾಗಿದ್ದನು. ಅವನು ಶರೀರಾಕೃತಿಯಲ್ಲಿ ಒಳ್ಳೆಯ ರೂಪವಂತನಾಗಿ ಸುಂದರ ಪುರುಷನೆನಿಸಿದ್ದನು. ಆದರೆ ಬೆಳ್ಳಗಿದ್ದುದನ್ನೆಲ್ಲಾ ಹಾಲೆಂದು ನಂಬುವ ಬಹಳ ಮುಗ್ಧನು. ಯಾರೇನು ಹೇಳಿದರೂ ನಂಬುವ ಅಮಾಯಕನು. ಇದರ ಮೇಲೆ ಅವನಿಗೆ ತನ್ನವರೆನ್ನಲು ಯಾರೂ ಇರಲಿಲ್ಲ.

ಒಂದು ದಿನ ಅವನು ನಗರದ ಬೀದಿಯಲ್ಲಿ ನಡೆಯುತ್ತಿದ್ದಾಗ, ರತ್ನಭದ್ರನೆಂಬ ಶ್ರೀಮಂತನ ಕುಮಾರಿ ಸುಲಕ್ಷಣೆ ಎಲ್ಲಿಗೋ ಪಲ್ಲಕಿಯಲ್ಲಿ ಹೋಗುವುದನ್ನು ನೋಡಿದನು. ಅವಳ ಅದ್ಭುತ ಸೌಂದರ್ಯವು ಪದ್ಮನಾಭನ ಕಣ್ಣುಗಳನ್ನು ಕೋರೈಸಿ ಬಿಟ್ಟಿತು. ಆ ಕ್ಷಣದಲ್ಲೇ ಅವನು ಸುಲಕ್ಷಣೆಯನ್ನು ಮದುವೆ ಮಾಡಿಕೊಳ್ಳಲೇ ಬೇಕೆಂದು ನಿಶ್ಚಯಿಸಿಕೊಂಡನು. ಅದರ ಆಗುಹೋಗುಗಳೊಂದನ್ನೂ ಅವನು ಯೋಚಿಸಲಿಲ್ಲ.

ರತ್ನಭದ್ರನು ಕುಮುದವತೀ ನಗರದಲ್ಲಿರುವ ಪ್ರಮುಖ ವರ್ತಕರಲ್ಲಿ ಒಬ್ಬನಾಗಿದ್ದನು. ಅವನದು ಕೋಟಿಗಟ್ಟಲೆಯ ಐಶ್ವರ್ಯ. ಅಂತಹ ಧನಿಕನ ಕುಮಾರಿಯನ್ನು ಪದ್ಮನಾಭನಂಥವನು ಮದುವೆಯಾಗುವುದು ಸಾಧ್ಯವಾಗುವ ಮಾತಲ್ಲ. ಅವನ ಸರಳ ಗುಣಕ್ಕೆ ಆ ಬಗೆಯ ಭೇದಭಾವನೆಗಳು ಹೊಳೆಯಲೇ ಇಲ್ಲ. ತನಗೂ ಅವಳಿಗೂ ಇರುವ ತಾರತಮ್ಯಗಳೇನೆಂಬುದೂ ಅವನಿಗೆ ತಿಳಿಯದು. ಪ್ರಕೃತಿ ಸಿದ್ಧವಾದ ಆಕರ್ಷಣೆಗಷ್ಟೇ ಅವನು ಒಳಗಾಗಿದ್ದನು.

ಆ ದಿನ ಸಾಯಂಕಾಲ ಪದ್ಮನಾಭನು ತನ್ನ ಮಿತ್ರನಾದ ರವಿವರ್ಮನೊಂದಿಗೆ ಸುಲಕ್ಷಣೆಯನ್ನು ಕುರಿತು ಹೇಳಿದನು. ರವಿವರ್ಮನಿಗೆ ಪದ್ಮನಾಭನ ಮೇಲೆ ಒಂದು ಬಗೆಯ ದ್ವೇಷಭಾವನೆ ಇದ್ದಿತು. ಅದಕ್ಕೆ ಕಾರಣ ಎಲ್ಲರೂ ಪದ್ಮನಾಭನನ್ನು ಸುಂದರನೆಂದು ಮೆಚ್ಚಿ ಮಾತಾಡುವುದೇ. ಆದರೆ ರವಿವರ್ಮನು ತನ್ನ ದ್ವೇಷವನ್ನು ಸ್ವಲ್ಪವೂ ಹೊರಗೆ ತೋರಿಸಲಿಲ್ಲ. ಸಮಯ ಸಾಧಿಸಿ ಪದ್ಮನಾಭನನ್ನು ನಗೆಗೀಡುಮಾಡಿ ತೃಪ್ತಿಪಡಬೇಕೆಂದು ಸಮಯ ಕಾಯುತ್ತಿದ್ದನು.

ಪದ್ಮನಾಭನು ಸುಲಕ್ಷಣೆಯ ಸೌಂದರ್ಯವನ್ನು ವರ್ಣಿಸಿ, ತಾನು ಅವಳನ್ನು ಮದುವೆಯಾಗಬೇಕೆಂದಿದ್ದೇನೆ, ಅದಕ್ಕೇನು ಮಾಡಬೇಕೆಂದು ಕ್ರಮವನ್ನು ಹೇಳುವಂತೆ ಕೇಳಿದನು.

"ಬಹಳ ಒಳ್ಳೆಯ ಕೆಲಸ ಪದ್ಮನಾಭಾ! ನಿನ್ನಂಥ ಅಂದದ ವರನು ಅಳಿಯನಾಗಿ ಬರುವೆನೆಂದರೆ ರತ್ನಭದ್ರನಿಗೆ ಎಷ್ಟೊಂದು ಸಂತೋಷವಾಗಬೇಡ!



ನೀನು ಕೇಳುವುದೇ ತಡ, ಸಂತೋಷದಿಂದ ಉಬ್ಬಿಬಿಡುತ್ತಾನೆ. ಹೋಗಿ ಕೇಳಪ್ಪ" ಎಂದು ರವಿವರ್ಮನು ಸಲಹೆ ಮಾಡಿದನು.

ಅದರಿಂದ ಉತ್ಸಾಹಗೊಂಡ ಪದ್ಮನಾಭನು ಶ್ರೀಮಂತ ರತ್ನಭದ್ರನ ಬಳಿಗೆ ಹೋಗಿ, "ನನ್ನನ್ನು ನೋಡಿದಿರಷ್ಟೇ? ನಾನು ನಿಮ್ಮ ಮಗಳಿಗೆ ತಕ್ಕ ವರನೆಂದು ನಿಮಗೆ ತೋರಿದರೆ, ಮದುವೆಯಾಗಲು ಬೇರೇನೂ ಅಭ್ಯಂತರವಿಲ್ಲವಷ್ಟೆ?" ಎಂದನು.

ರತ್ನಭದ್ರನು ದೊಡ್ಡ ಧನಿಕನಿದ್ದಂತೆಯೇ ದೊಡ್ಡ ಮನಸ್ಸಿನವನೂ ಹೌದು. ಅನಾಥನಾದ ಪದ್ಮನಾಭನು ಸರಳ ಗುಣದವನೆಂದು ಅವನಿಗೆ ಗೊತ್ತಿತ್ತು. ಅಂತಲೇ ಸಾಧ್ಯವಿಲ್ಲವೆನ್ನದೆ, ಮುಗುಳು ನಗುತ್ತ, "ನಿನಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡಬಹುದು. ನೀನು ಒಂದು ಕೆಲಸ ಮಾತ್ರ ಮಾಡು, ಸಾಕು. ನನಗೆ ಒಂದು ಮಣ ಬಂಗಾರ ತಂದು ಕೊಡು, ಅಷ್ಟೇ" ಎಂದನು.

ಅಷ್ಟು ಬಂಗಾರ ತರಲು ಪದ್ಮನಾಭನಿಂದಾಗದೆಂದು ರತ್ನಭದ್ರನಿಗೆ ಗೊತ್ತಿತ್ತು. ಆದರೆ ಪದ್ಮನಾಭನು ಅಷ್ಟಕ್ಕೆ ಸುಮ್ಮನಾಗದೆ, ಮಿತ್ರ ರವಿವರ್ಮನ ಹತ್ತಿರ ಬಂದು ಸಲಹೆ ಕೇಳಿದನು.

"ಬಂಗಾರ ತಾನೇ? ಅದಕ್ಕೇನೂ ಕಷ್ಟವಿಲ್ಲ. ಬಡ್ಡೀ ವ್ಯಾಪಾರ ಮಾಡುವ ಸೋಮನಾಥನ ಹತ್ತಿರ ಹೋಗಿ ಸಾಲ ಕೇಳು. ರತ್ನಭದ್ರನ ಅಳಿಯನಾಗುವಂಥ ಶ್ರೀಮಂತನಿಗೆ ಎಷ್ಟಾದರೂ ಸಾಲ ಸಿಗುತ್ತದೆ" ಎಂದನು ರವಿವರ್ಮ.

ಪದ್ಮನಾಭನು ಕೂಡಲೇ ಸೋಮನಾಥನ ಬಳಿಗೆ ಹೋಗಿ, ತನ್ನ ವಿಷಯ ಹೇಳಿ, "ಒಂದು ಮಣ ಬಂಗಾರವನ್ನು ನನಗೆ ಸಾಲವಾಗಿ ಕೊಡಿರಿ" ಎಂದು ಕೇಳಿದನು.

ಈ ಪಾಪದ ಹುಡುಗನನ್ನು ಸ್ವಲ್ಪ ಆಟವಾಡಿಸಬೇಕೆಂದು ಸೋಮನಾಥನಿಗೆ ತೋರಿತು. ಆ ಕಾರಣದಿಂದ ಅವನು ಪದ್ಮನಾಭನನ್ನು ನೋಡಿ, "ನಿನ್ನಂಥವನಿಗೆ ನಾನು ಸಾಲ ಕೊಡುವುದೆಂದರೇನಪ್ಪ! ಅಕೋ, ಅಲ್ಲಿ ಕಾಣುವ ನದಿಯ ಬದಿಯಲ್ಲಿರುವ ಮರವನ್ನು ನೋಡಿದೆಯಾ? ಆ ಮರದ ಬುಡದಲ್ಲಿ ಭೈರವ ಬೈರಾಗಿ ಎಂಬವನಿದ್ದಾನೆ. ಅವನು ಕಬ್ಬಿಣ, ಹಿತ್ತಾಳೆಗಳಂತಹ ಲೋಹಗಳನ್ನು ಬಂಗಾರವಾಗಿ ಮಾರ್ಪಡಿಸುವ ಪರಮವೇದಿ ವಿದ್ಯೆ ಕಲಿತವನು. ನೀನು ಹೋಗಿ ಅವನನ್ನು ಕೇಳಿದರೆ ನಿನಗೆ ಉಚಿತವಾಗಿಯೇ ಒಂದು ಮಣ ಬಂಗಾರ ಕೊಟ್ಟುಬಿಡುತ್ತಾನೆ" ಎಂದನು.

ಬಂಗಾರವು ಉಚಿತವಾಗಿಯೇ ಲಭಿಸುವುದೆಂಬ ಮಾತು ಕೇಳಿ, ಪದ್ಮನಾಭನು ಬಹಳ ಸಂತೋಷದಿಂದ ಭೈರವ ಬೈರಾಗಿಯ ಹತ್ತಿರ ಹೋಗಿ, "ಸ್ವಾಮಿಾ, ನನಗೆ ಒಂದು ಮಣ ಬಂಗಾರ ಉಚಿತವಾಗಿ ಕೊಡಿರಯ್ಯ" ಎಂದು ಕೇಳಿದನು.

ಭೈರವ ಬೈರಾಗಿ ದೊಡ್ಡ ಮೋಸಗಾರನಾಗಿದ್ದ. ಪರಮವೇದಿ ವಿದ್ಯೆ ಕಲಿಸುತ್ತೇನೆಂದು ಹೇಳಿ, ಪಾಪ



ದವರ ಕೈಯಿಂದ ಬಹಳ ಹಣ ಎಳೆದುಕೊಳ್ಳುತ್ತಿದ್ದ. ಅವನು ಹಾಗೆ ಸೇರಿಸಿಟ್ಟ ಹಣವನ್ನೆಲ್ಲ ಗೌರಮುಖಿ ನೆಂಬ ದೊಡ್ಡ ಕಳ್ಳನು ಕದ್ದುಕೊಂಡು ಹೋಗಿದ್ದ. ಆ ಕಳ್ಳನನ್ನು ಹಿಡಿಯಬೇಕೆಂಬ ಆಲೋಚನೆಯಲ್ಲಿ ದ್ದನು ಭೈರವ ಬೈರಾಗಿ.

"ಪದ್ಮನಾಭಾ, ನೀನು ಸುಂದರ ಪುರುಷನಷ್ಟೇ ಅಲ್ಲ, ಬುದ್ಧಿಯಲ್ಲಿಯೂ ಚುರುಕಾದವನು. ತುಂಬಾ ಧೈರ್ಯವೂ ನಿನಗಿದೆ. ಒಂದು ಕೆಲಸ ಮಾಡು. ನಗರದಾಚೆಗಿರುವ ಅಡವಿಯಲ್ಲಿ ಗೌರಮುಖಿನೆಂಬ ಭಾರಿ ಕಳ್ಳನೊಬ್ಬನಿದ್ದಾನೆ. ಅವನನ್ನು ನೀನು ಹೇಗಾದರೂ ಹಿಡಿದು ನನ್ನ ಬಳಿಗೆ ತಂದೆಯಾದರೆ ನಿನಗೆ ಉಚಿತವಾಗಿ ಒಂದು ಮಣ ಬಂಗಾರ ಕೊಡುತ್ತೇನೆ" ಎಂದನು ಭೈರವ ಬೈರಾಗಿ.

ಸರಿ ಎಂದು ಪದ್ಮನಾಭನು ಕಾಡಿಗೆ ಹೋಗಿ ಅಲ್ಲಿ ಇಲ್ಲಿ ಹುಡುಕಾಡಿ, ಹೇಗೊ ಗೌರಮುಖಿನಿರುವ ಪ್ರದೇಶವನ್ನು ತಲಪಿದನು. ಅಲ್ಲಿ ಕಳ್ಳ ಗೌರ ಮುಖಿನು ಅವನನ್ನು ಆದರದಿಂದ ಮಾತಾಡಿಸಿ, "ಏನಪ್ಪಾ, ನನ್ನ ಗುಂಪಿನಲ್ಲಿ ಸೇರಬೇಕೆಂದು ಬಂದೆಯಾ ?" ಎಂದು ಕೇಳಿದನು.

"ಅದೇನಿಲ್ಲ" ಎಂದು ಪದ್ಮನಾಭನು ತನ್ನ ಮದುವೆಯ ಸಂಗತಿಯನ್ನು ಅವನಿಗೆ ಹೇಳಿ, "ಭೈರವ ಬೈರಾಗಿ ನಿನ್ನನ್ನು ತನ್ನ ಹತ್ತಿರ ಕರೆದುಕೊಂಡು ಬಂದರೆ ನನಗೆ ಉಚಿತವಾಗಿ ಒಂದು ಮಣ ಬಂಗಾರ ಕೊಡುತ್ತೇನೆಂದರು. ದಯಮಾಡಿ ನನ್ನೊಂದಿಗೆ ಬಂದು, ನನ್ನ ಮದುವೆಯ ಪುಣ್ಯ ಕಟ್ಟಿಕೋ" ಎಂದನು ಪದ್ಮನಾಭ ದೀನನಾಗಿ.

ಪದ್ಮನಾಭನು ಬಹಳ ಸರಳ ಗುಣದವನೆಂದು ಗೌರಮುಖಿನಿಗೆ ಅರ್ಥವಾಯಿತು. ಅವನು ಈ ಅಮಾಯಕನನ್ನು ಚಿಕ್ಕದೊಂದು ತಮಾಶೆಗೆ ಗುರಿಪಡಿ ಸೋಣವೆಂದುಕೊಂಡು, "ಛೀ ಛೀ ! ನಿನಗೆ ಒಂದು ಮಣ ಬಂಗಾರ ಯಾವ ಮೂಲೆಗೆ ! ಹತ್ತು ಮಣ ಬಂಗಾರ ಸಿಗುವ ಮಾರ್ಗವನ್ನು ನಾನು ಹೇಳುತ್ತೇನೆ. ಅಕೋ, ಅಲ್ಲಿ ಕಾಣುವ ಗುಡ್ಡದ ಗುಹೆಯೊಳಗೆ ಕರಿಭೂತ ಒಂದಿದೆ. ಹೋಗಿ ನನ್ನ ಹತ್ತಿರ ಕೇಳಿದ ಹಾಗೆ ಅದನ್ನು ಕೇಳಿದರೆ ಸಾಕು, ಕೇಳಿದಷ್ಟು ಬಂಗಾರ ಕೊಡುತ್ತದೆ" ಎಂದನು.

ಈ ಮಾತು ಕೇಳಿ ಪದ್ಮನಾಭನು ಸುಲಕ್ಷಣೆ ಯೊಂದಿಗೆ ತನ್ನ ಮದುವೆ ಆಗಿಹೋದಷ್ಟು ಸಂತೋಷ ಪಡುತ್ತ, ಆ ಗುಡ್ಡದ ಗುಹೆಯ ಬಳಿಗೆ ಹೋದನು. ಅಲ್ಲಿ ಒಂದು ಗುಹೆಯ ಮುಂದೆ ಬಂಡೆಕಲ್ಲಿನ ಮೇಲೆ ಕರಿಭೂತವು ಕುಳಿತುಕೊಂಡಿದ್ದಿತು.

ನಿಜಕ್ಕೂ ಈ ಕರಿಭೂತವು ಯಾರಿಗೂ ಕೇಡು ಬಗೆಯುವ ಸ್ವಭಾವದ್ದಲ್ಲ. ಆದರೆ ಅದರ ಭಯಂಕರ ವಾದ ರೂಪವನ್ನು ನೋಡಿ ಜನರು ಭಯಕಂಪಿತ ರಾಗಿ ಓಡಿ ಹೋಗುತ್ತಿದ್ದರು. ಮಗುವಿನಂತೆ ನಿಷ್ಕಲ್ಮಷ ನಾದ ಪದ್ಮನಾಭನು ಯಾವ ಭಯವೂ ಇಲ್ಲದೆ ಕರಿಭೂತದ ಹತ್ತಿರ ಹೋಗಿ, ಕೈಮುಗಿದು ತನ್ನ

ಕಥೆಯನ್ನೆಲ್ಲಾ ಆದರ ಮುಂದೆ ಹೇಳಿ, "ರತ್ನಭದ್ರನ ಕುಮಾರಿ ಸುಲಕ್ಷಣೆಯೊಂದಿಗೆ ನನ್ನ ಮದುವೆ ನಡೆಯಬೇಕಾದರೆ ನೀವು ಸಹಾಯ ಮಾಡುವಿರೆಂದು ಕಳ್ಳನು ಹೇಳಿದನು. ಒಂದೇ ಒಂದು ಮಣ ಬಂಗಾರ ಕೊಟ್ಟರೇ ಸಾಕು. ಸಾಯುವವರೆಗೂ ನಿಮ್ಮ ಉಪಕಾರ ಮರೆಯಲಾರೆನು" ಎಂದನು.

ಸ್ವಲ್ಪವೂ ಹೆದರದೆ ತನ್ನ ಬಳಿಗೆ ಬಂದವನು ಎಷ್ಟೊಂದು ಅಮಾಯಕನೋ, ಎಷ್ಟೊಂದು ನಿರ್ಮಲ ಹೃದಯದವನೋ ಎಂದುಕೊಂಡು ಕರಿ ಭೂತವು ಪದ್ಮನಾಭನನ್ನು ಮೆಚ್ಚಿತು. ಅದಕ್ಕೆ ಅವನ ಮೇಲೆ ಆದರಭಾವವೆದ್ದಿತು.

ಭೂತವು ಎದ್ದು ಗುಹೆಯೊಳಗೆ ಹೋಗಿ, ಧಗ ಧಗನೆ ಹೊಳೆಯುವ ನಾಲ್ಕು ವಜ್ರಗಳನ್ನು ತಂದು ಪದ್ಮನಾಭನಿಗೆ ತೋರಿಸುತ್ತ "ನಿನಗೆ ಬೇಕಾದರೆ ಒಂದು ಮಣ ಬಂಗಾರವಲ್ಲ, ಲಕ್ಷಕೋಟಿ ಬೆಲೆ ತಾಳುವ ಈ ವಜ್ರಗಳನ್ನು ಕೊಡುತ್ತೇನೆ. ನಿನಗೆ ಇವುಗಳ ಅಗತ್ಯವಿರಲಾರದೆಂದು ನನ್ನ ನಂಬುಗೆ. ನೀನು ನೆಟ್ಟಗೆ ನಗರಕ್ಕೆ ಹಿಂದಿರುಗಿ ಹೋಗಿ ರತ್ನ ಭದ್ರನಿಗೆ ಇಲ್ಲಿ ನಡೆದುದನ್ನೆಲ್ಲಾ ಹೇಳು. ಆಗಲೂ ಅವನು ಧನವೇ ಬೇಕೆಂದರೆ ಇಲ್ಲಿಗೆ ಬಂದು ಈ ವಜ್ರಗಳನ್ನು ತೆಗೆದುಕೊಂಡು ಹೋಗಲಿ. ಮಣ ಬಂಗಾರ ಹೊರಲು ನಿನ್ನಿಂದಾಗದು" ಎಂದಿತು.

ಪದ್ಮನಾಭನು ಕರಿಭೂತಕ್ಕೆ ತನ್ನ ಕೃತಜ್ಞತೆ ಹೇಳಿ ಕೊಂಡು, ನಗರಕ್ಕೆ ಬಂದು ನಡೆದ ಸಂಗತಿಯನ್ನೆಲ್ಲಾ ರತ್ನಭದ್ರನೊಂದಿಗೆ ಹೇಳಿ, "ಆ ವಜ್ರಗಳನ್ನು ತರಲೆ?" ಎಂದು ಕೇಳಿದನು.

ರತ್ನಭದ್ರನು ಆಪ್ಯಾಯತೆಯಿಂದ ಪದ್ಮನಾಭನ ಹೆಗಲ ಮೇಲೆ ಕೈಹಾಕಿ. "ಅದೇನೂ ಬೇಡ. ನೀನು ನನ್ನ ಅಳಿಯನಾಗಲು ತಕ್ಕವನೇ ಆಗಿರುವಿ! ನಿನ್ನಂಥ ಅಳಿಯನೇ ನನಗೆ ಬೇಕು. ಸುಲಕ್ಷಣೆಯೊಂದಿಗೇ ನಿನಗೆ ಮದುವೆ ನಡೆಸುತ್ತೇನೆ" ಎಂದನು.

ಬೇತಾಳವು ಇಲ್ಲಿಗೆ ಕಥೆಯನ್ನು ನಿಲ್ಲಿಸಿ, "ಎಲೈ ತ್ರಿವಿಕ್ರಮ ರಾಜನೇ! ರತ್ನಭದ್ರನಂತಹ ಲೋಕ ಜ್ಞಾನ, ವ್ಯವಹಾರಜ್ಞಾನ ಉಳ್ಳವನು, ವರ್ತಕ



ಪ್ರಮುಖನು, ಪರಮ ಸಾಧು ಗುಣದ ಪದ್ಮನಾಭನಿಗೆ ತನ್ನ ಕುಮಾರಿಯನ್ನು ಕೊಟ್ಟು ಮದುವೆ ಮಾಡುವುದುಂಟೆ? ಅವನು ಕರಿಭೂತವು ತನಗೇನಾದರೂ ಕೇಡು ಮಾಡುವುದೆಂದು ಹೆದರಿ ಇದಕ್ಕೆ ಒಪ್ಪಿದನೆ? ಪದ್ಮನಾಭನು ಒಂದು ಮಣ ಬಂಗಾರವಲ್ಲ, ಕೋಟಿಗಟ್ಟ್ಲೆ ಬೆಲೆ ಬಾಳುವ ವಜ್ರಗಳನ್ನು ತಂದುಕೊಡಲಿದ್ದನಷ್ಟೆ? ಅಂತಹ ಅವಕಾಶವನ್ನು ಅವನು ಏಕೆ ಉಪಯೋಗಿಸಿಕೊಳ್ಳಲಿಲ್ಲ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದಿದ್ದರೆ ನಿನ್ನ ತಲೆ ಸಾವಿರ ಹೋಳುಗಳಾಗುತ್ತವೆ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಕರಿಭೂತವು ತನಗೆ ಕೇಡು ಮಾಡುವುದೆಂಬ ಭಯವು ರತ್ನಭದ್ರನಿಗೆ ಸ್ವಲ್ಪವೂ ಇರಲಿಲ್ಲ. ಕೋಟ್ಯಾಧೀಶನಾದ ಅವನಿಗೆ ಕರಿಭೂತವು ಕೊಡಲಿದ್ದ ಧನವು ಒಂದು ಲೆಕ್ಕದ್ದಲ್ಲ. ಪದ್ಮನಾಭನು ಹೇಳಿದುದನ್ನೆಲ್ಲ ಕೇಳಿದ ಮೇಲೆ, ಕರಿಭೂತವು ತನಗೆ ಹಾನಿ ಮಾಡುವುದಕ್ಕೆ ಬದಲಾಗಿ ಎಷ್ಟೋ ಮೇಲು ಮಾಡಲು ನೋಡುವುದೆಂದೇ ತಿಳಿದನು. ಅದು ಪರೋಕ್ಷವಾಗಿ ಪದ್ಮನಾಭನ ಮೂಲಕ ಅವನಿಗೆ ಒಂದು ಜೀವಿತ ತತ್ವವನ್ನು ಬೋಧಪಡಿಸಿತು. ಅದೇನೆಂದರೆ, ಮನುಷ್ಯನಿಗೆ ಇರುವ ಧನಕ್ಕಿಂತ, ಅವನಲ್ಲಿರುವ ಒಳ್ಳೆಯ ಬುದ್ಧಿಯೂ, ಕೈಹಾಕಿದ ಕಾರ್ಯವನ್ನು ಸಾಧಿಸಿ ತೀರಬೇಕೆಂಬ ಹಟವೂ, ಪ್ರಾಮಾಣಿಕತೆಯೂ ಹೆಚ್ಚಿಗೆ ಬೆಲೆ ಬಾಳುವಂತಹುದು. ಅಂತಹವರು ಜೀವಿತದಲ್ಲಿ ಎಂದೋ ಒಂದು ದಿನ ಉನ್ನತ ಸ್ಥಾನಕ್ಕೆ ಬರಬಲ್ಲರು. ದುಷ್ಟಬುದ್ಧಿಯುಳ್ಳ ಪದ್ಮನಾಭನ ಸ್ನೇಹಿತನೂ, ಬೈರಾಗಿಯೂ, ಕಳ್ಳನೂ ಎಂದೋ ಒಂದು ದಿನ ತಮ್ಮ ದುಷ್ಕಾರ್ಯಗಳಿಗೆ ತಪ್ಪದೆ ಶಿಕ್ಷೆ ಅನುಭವಿಸಿ ತೀರುವರು. ಕರಿಭೂತದ ವರ್ತನೆಯಿಂದ ಈ ಸತ್ಯವನ್ನು ತಿಳಿದುಕೊಂಡ ರತ್ನಭದ್ರನಿಗೆ ತನ್ನ ಭಾವೀ ಅಳಿಯನ ಅಮಾಯಕತ್ವವು ಲೋಪವಾಗಿ ಕಾಣಲಿಲ್ಲ. ಅಲ್ಲದೆ, ಪದ್ಮನಾಭನು ಒಂದು ಸಾರಿ ತನ್ನ ಅಳಿಯನಾಗಿ ಬಿಟ್ಟರೆ, ವರ್ತಕ ವ್ಯವಹಾರಗಳಲ್ಲಿ ಅವನನ್ನು ಪ್ರವೇಶಗೊಳಿಸಿ, ತನ್ನ ಶಿಕ್ಷಣದಿಂದ ಅವನಲ್ಲಿ ಸುಲಭವಾಗಿ ಲೋಕಜ್ಞಾನ ಮೂಡಿಸುವುದು ಅಷ್ಟೇನೂ ಕಷ್ಟವಲ್ಲವೆಂದು ಅವನು ಗಣಿಸಿಕೊಂಡಿದ್ದನು. ಹೀಗೆಲ್ಲಾ ಆಲೋಚಿಸಿ ರತ್ನಭದ್ರನು ಪದ್ಮನಾಭನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳಲು ನಿಶ್ಚಯಿಸಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವ ಸಮೇತ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ರಾಜನ ಹಾಡು

ಒಂದು ಕಾಲದಲ್ಲಿ ಶಚೀಂದ್ರನೆಂಬೊಬ್ಬ ರಾಜ ನಿದ್ದನು. ಅವನಿಗೆ ಸಂಗೀತದ ಮೇಲೆ ಆಸಕ್ತಿ ಇದ್ದು ದರಿಂದ, ಹೊಸದಾಗಿ ಸಂಗೀತ ಶಾಸ್ತ್ರದೊಳಗೆ ಪ್ರವೇಶಿಸಿ ಸ್ವಲ್ಪ ಮಟ್ಟಿಗೆ ಅಭ್ಯಾಸ ಮಾಡಿಕೊಂಡನು. ಆಮೇಲೆ ಹತ್ತು ಮಂದಿಗಳಿಗೆ ತನ್ನ ಹಾಡನ್ನು ಕೇಳಿಸಲಿಕ್ಕೂ ತೊಡಗಿದನು, ರಾಜನು ಹಾಡಲು ಪ್ರಾರಂಭಿಸಿದ ಮೇಲೆ, ಅವನ ಆಶ್ರಿತರು ಮಾತ್ರ ವಲ್ಲದೆ, ಮಂತ್ರಿಗಳೂ, ಇತರ ದೊಡ್ಡ ದೊಡ್ಡ ಉದ್ಯೋಗಸ್ಥರು ಕೂಡಾ ರಾಜನ ಹಾಡನ್ನು ಕೇಳಲೇ ಬೇಕಾಗಿ ಬರುತ್ತಿದ್ದಿತು. ಆ ಕಾರಣದಿಂದ ಅವರು ಮಾಡಬೇಕಾದ ಕೆಲಸಗಳು ಸಕಾಲದಲ್ಲಿ ನಡೆಯದೆ ತೊಂದರೆಯಾಗುತ್ತಿದ್ದಿತು. ಈ ಸಂಗತಿಯನ್ನು ರಾಜನ ಹತ್ತಿರ ಹೇಗೆ ಹೇಳುವುದೆಂದು ತಿಳಿಯದೆ ಎಲ್ಲರೂ ತಮ್ಮ ತಮ್ಮೊಳಗೇ ಚಡಪಡಿಸಿಕೊಂಡಿದ್ದರು.

ಎಷ್ಟು ಆಲೋಚನೆ ಮಾಡಿದರೂ ಈ ಸಮಸ್ಯೆ ಯನ್ನು ಹೇಗೆ ಪರಿಹರಿಸಿಕೊಳ್ಳುವುದೆಂದು ಯಾರಿಗೂ ಗೊತ್ತಾಗಲಿಲ್ಲ. ಇದನ್ನು ನೇರಾಗಿ ರಾಜನ ಹತ್ತಿರ ಹೇಳಿಬಿಟ್ಟರೆ, ಅವನ ಹಾಡು ಚೆನ್ನಾಗಿಲ್ಲವೆಂದು ತಾವೆಲ್ಲಾ ಅವನ ಮುಖಕ್ಕೇ ಹೇಳಿದ ಹಾಗಾಗಿ, ಕೋಪ ಬಂದು ಬಿಟ್ಟರೆ ತಮ್ಮ ಗತಿ ಏನಾದೀತೋ! ತಮ್ಮ ಉದ್ಯೋಗಕ್ಕೆ ಉದ್ವಾಸವಾಗುವುದೋ! ಪ್ರಾಣವೇ ಹೋಗುವುದೋ!

ರಾಜಾ ಶಚೀಂದ್ರನ ಆಸ್ಥಾನದಲ್ಲಿ ವಸಂತಕ ನೆಂಬವನು ವಿದೂಷಕನಾಗಿದ್ದನು. ಅವನಿಗೂ ಮಹಾ ರಾಜನ ಹಾಡನ್ನು ದಿನಾ ಗಂಟೆ ಗಟ್ಲೆ ಕೇಳುವುದು ಬಲು ಬೇಸರವಾಗಿತ್ತು. ಒಂದು ದಿನ ರಾಜನು ತನ್ನ ಹಾಡನ್ನು ಮುಗಿಸಿದ ಮೇಲೆ ಪಕ್ಕದಲ್ಲಿದ್ದ ವಿದೂಷಕ ನೊಂದಿಗೆ "ನನ್ನ ಕಂಠದಿಂದ ಹೊರಡುವ ಸ್ವರ ಗಾತ್ರದಲ್ಲಿ ಏನೋ ಇಂದ್ರಜಾಲವಿರುವ ಹಾಗಿದೆ. ನಾನು ಹಾಡುವಷ್ಟು ಹೊತ್ತು ನೀವೆಲ್ಲರೂ ನನ್ನ ಸುತ್ತಲೂ ಚಿತ್ರ ಪ್ರತಿಮೆಗಳ ಹಾಗೆ ಇರುವಿರೆಂದರೆ, ನಾನು ಅಷ್ಟು ದೊಡ್ಡ ಗಾಯಕನೋ ಎಂಬ ಅನು ಮಾನವಾಗುತ್ತದೆ." ಎಂದನು.

ಆ ಮಾತು ಕೇಳಿ ವಿದೂಷಕನು ಮುಖದಲ್ಲಿ ಭಯದ ಛಾಯೆಯನ್ನು ಬರಿಸಿಕೊಂಡು, "ಪ್ರಭೂ, ನೀವು ಹಾಡುವುದನ್ನು ಕೇಳಲು ಒಂದು ಸಾರಿ ಸಭೆಯಲ್ಲಿ ಬಂದು ಕುಳಿತ ಮೇಲೆ ಎದ್ದು ಹೋಗ ಬೇಕಾದರೆ ಸಾಧಾರಣ ಧೈರ್ಯ ಸಾಕೆ?" ಎಂದನು.

ಜಿ. ರತ್ನ

ವಿದೂಷಕನ ಮಾತಿನೊಳಗಿನ ಅಂತರ್ಯವು ರಾಜನಿಗೆ ಕೂಡಲೇ ಅರ್ಥವಾಯಿತು. ಅವನು ಸ್ವಲ್ಪವೂ ಕೋಪಿಸಲಿಲ್ಲ. ಬದಲಾಗಿ ಮುಗುಳು ನಗುತ್ತ, "ದಿನಾ ನನ್ನ ಹಾಡನ್ನು ಕೇಳುತ್ತಾ ಕುಳಿತುಕೊಳ್ಳುವವರಲ್ಲಿ, ಕೆಲವರು ನನ್ನ ಮೆಚ್ಚುಗೆಗಾಗಿಯಾದರೆ, ಮತ್ತೆ ಕೆಲವರು ನನ್ನ ಅಧಿಕಾರಕ್ಕೆ ಹೆದರಿಕೊಂಡವರೆಂದು ಅರ್ಥವಾಯಿತು. ಈ ಸಂಗತಿ ಇಷ್ಟು ಕಾಲ ನನಗೆ ತಿಳಿಯದೇ ಹೋದದಕ್ಕೆ ಚಿಂತಿಸುತ್ತೇನೆ," ಎಂದನು.

"ಮನ್ನಿಸಬೇಕು ಪ್ರಭುಗಳು. ನನ್ನ ಮಾತು ತಮಗೆ ಕೋಪ ಬರಿಸುವುದೇನೋ ಅಂದುಕೊಂಡಿದ್ದೆ," ಎಂದನು ವಿದೂಷಕ.

"ಹಾಗೇನಿಲ್ಲ. ನಿನ್ನನ್ನು ಅಭಿನಂದಿಸುತ್ತೇನೆ. ಆದರೆ ಈಗ ಥಕ್ಕನೆ ನಾನು ಹಾಡುವುದನ್ನು ನಿಲ್ಲಿಸಿಬಿಟ್ಟರೂ, ಯಾರೂ ನನ್ನ ಹಾಡು ಕೇಳಲು ಬರಬಾರದೆಂದು ಆಜ್ಞೆ ಮಾಡಿದರೂ ಎಲ್ಲರಿಗೂ ವಿನೋ ವಿಕಲ್ಪವಾದ ಸಂಶಯ ಬರುವ ಹಾಗಿದೆ. ಇಷ್ಟು ಕಾಲ ನನ್ನಿಂದ ನಿಮಗೆಲ್ಲಾ ಬೇಸರ ಬರುವ ಹಾಗಾಯಿತೆನ್ನುವುದೂ ರಾಜನಾಗಿರುವ ನನಗೂ ಒಂದು ಅವಮಾನದ ವಿಷಯ. ಈ ಸಮಸ್ಯೆಯಿಂದ ಹೇಗೆ ಹೊರಬೀಳುವುದು ?" ಎಂದು ಹೇಳಿ ರಾಜನು ಯೋಚನೆಗೆ ಬಿದ್ದನು.

"ಪ್ರಭೂ, ಪ್ರತಿ ವಿಷಯಕ್ಕೂ ಹೇಳುವ ಪದ್ಧತಿಯೊಂದಿರುತ್ತದೆ. ನಾನು ನನ್ನ ಪದ್ಧತಿಯಲ್ಲಿ ಹೇಳಬೇಕೆಂಬುದನ್ನು ಹೇಳಿಬಿಟ್ಟೆನು. ಹಾಗೆಯೇ ನೀವು ಕೂಡಾ ನಿಮ್ಮ ಗೌರವಕ್ಕೆ ಭಂಗಬಾರದ ಹಾಗೆ ಬರುವವರಿಗೆ ಆದೇಶ ಮಾಡಬಹುದು. ಆಲೋಚಿಸಿರಿ ಪ್ರಭೂ" ಎಂದನು ವಿದೂಷಕ.

ಮರು ದಿನ ರಾಜನು ಹಾಡುವುದನ್ನು ಪ್ರಾರಂಭಿಸಿದ ಕೂಡಲೇ, ಅಲ್ಲಿ ಸೇರಿದವರನ್ನು ಕೋಪದಿಂದ ನೋಡಿ, "ಇಷ್ಟು ಕಾಲದಿಂದ ನೋಡುತ್ತಾ ಇದ್ದೇನೆ. ನನ್ನ ಸಂಗೀತದ ಸಾಧನೆಗೆ ಸ್ವಲ್ಪ ಏಕಾಂತ ಬೇಕೆಂಬ ವಿಷಯ ನಿಮ್ಮ ಯಾರ ಮನಸ್ಸಿಗೂ ಬಂದಿಲ್ಲವೇನು ? ನಾನು ಕೊರಳು ಬಿಚ್ಚಿದ ಕೂಡಲೇ ಸುತ್ತಲೂ ಗಮ್ಮನೆ ಕುಳಿತು ಬಿಡುವಿರಿ. ಇನ್ನು ನಾನಾಗಿ ಹೇಳದೆ ಉಪಾಯವಿಲ್ಲ. ಇನ್ನು ಮೇಲೆ ನಿಮ್ಮ ಕೆಲಸಗಳನ್ನು ಬಿಟ್ಟು ನನ್ನ ಸಮಕ್ಷಮಕ್ಕೆ ಸಂಗೀತ ಸಾಧನೆಯ ಸಮಯದಲ್ಲಿ ಬಂದು ಕುಳಿತರೆ ಕಠಿಣ ಶಿಕ್ಷೆಗೆ ಗುರಿಯಾಗಬೇಕಾದೀತು" ಎಂದು ಎಚ್ಚರಿಸಿದನು.

ಹೀಗೆ ರಾಜನ ಸಂಗೀತ ಕೇಳುವ ಕಷ್ಟ ಬಿಟ್ಟು ಹೋದುದರಿಂದ ಎಲ್ಲರಿಗೂ ಸಂತೋಷವಾಯಿತು. ರಾಜನಲ್ಲಿ ಬಂದ ಈ ಆಕಸ್ಮಿಕ ಮಾರ್ಪಾಟಿಗೆ ಕಾರಣವು ಮಾತ್ರ ಯಾರಿಗೂ ಗೊತ್ತಿರಲಿಲ್ಲ.





# ಉಚಿತ ಮೂಲಧನ

ಒಂದು ಊರಿನಲ್ಲಿ ಪರಂಧಾಮಯ್ಯನೆಂಬ ರೈತನಿಗೆ ಅಲ್ಪ ಸ್ವಲ್ಪ ಭೂಮಿಕಾಣಿಗಳಿದ್ದವು. ಆತನು ಸ್ವತಃ ಕಷ್ಟಪಟ್ಟು ಕೆಲಸಮಾಡಿ, ಸ್ವಂತ ವ್ಯವಸಾಯದಿಂದ ಬರುವ ಆದಾಯದಿಂದ ಮಿತವ್ಯಯಿಯಾಗಿ ನಾಲ್ಕು ಮಂದಿ ಗಂಡು ಮಕ್ಕಳನ್ನು ಪೋಷಿಸಿ ದೊಡ್ಡವರನ್ನಾಗಿ ಮಾಡಿದನು. ಅಷ್ಟೇ ಅಲ್ಲದೆ ಸ್ವಲ್ಪ ಹಣವನ್ನೂ ಉಳಿಸಿ, ಹಳೆಯ ಸಣ್ಣ ಮನೆಯನ್ನು ಕೆಡವಿಸಿ ಒಂದು ಸ್ವಂತ ಮನೆಯನ್ನು ಕೂಡಾ ಕಟ್ಟಿಸಿಕೊಂಡನು. ಊರೊಳಗೂ ಪಟ್ಟಣದಲ್ಲಿಯೂ ಅವನಿಗೆ ಒಳ್ಳೆಯ ಮಾತಿನವಾಸಿಯೂ ಇದ್ದಿತು.

ಒಬ್ಬನೇ ಕುಟುಂಬ ಭಾರವನ್ನೆಲ್ಲಾ ಹೊರಬೇಕಾಗಿ ಬಂದುದರಿಂದ, ಆತನ ತಂದೆಯಿಂದ ಸಂಕ್ರಮಿಸಿ ಬಂದ ಹೊಲಗಳ ಹೊರತು, ತಾನಾಗಿ ಒಂದು ಹೊಲವನ್ನೋ ತೋಟವನ್ನೋ ಕೊಂಡುಕೊಳ್ಳಲಾಗದೆ ಹೋದನು. ಅದರೆಡೆಯಲ್ಲಿ ನಾಲ್ವರು ಗಂಡು ಮಗಂದಿರಿಗೂ ಮದುವೆಯಾಗಿ ಸೊಸೆಯಂದಿರು ಮನೆ ತುಂಬಿಕೊಂಡುದರಿಂದ ದೊಡ್ಡದಾದ ಸಂಸಾರವು ಇನ್ನೂ ದೊಡ್ಡದಾಗಲಿರುವುದರಿಂದ, ತಿಂಡಿ ಬಟ್ಟೆಗಳನ್ನು ಒದಗಿಸುವುದು ಹೇಗೆಂಬ ಸಮಸ್ಯೆ ಪರಂಧಾಮಯ್ಯನ ಮನಸ್ಸಿಗೆ ತೋರತೊಡಗಿತು. ಮಗಂದಿರು ಗ್ರಾಮವನ್ನು ಬಿಟ್ಟು ತಮ್ಮ ತಮ್ಮ ಬದುಕಿನ ದಾರಿ ತಾವೇ ನೋಡಿಕೊಂಡಾರೆಂದು ಮೊದಲು ನಂಬಿದನು. ಹಾಗೇನೂ ಆಗುವ ಪರಿಸ್ಥಿತಿ ಕಾಣಲಿಲ್ಲ.

ಒಂದು ದಿನ ಅವನು ಹಿರಿಯ ಮಗನನ್ನು ಕರೆದು "ನೋಡಪ್ಪಾ, ನಾವು ವ್ಯವಸಾಯ ಮಾಡಿಕೊಳ್ಳುವ ಹೊಲಗಳು ಹೆಚ್ಚಾಗುವ ಅವಕಾಶವಿಲ್ಲವಷ್ಟೆ ? ಆದರೆ ಕುಟುಂಬದ ಖರ್ಚುಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋಗುತ್ತವೆ. ಈ ಖರ್ಚುಗಳು ಸರಿಹೋಗುವಂತೆ ಆದಾಯ ಹೆಚ್ಚಾಗುವ ದಾರಿ ಏನಾದರೂ ಆಲೋಚನೆ ಮಾಡಿದ್ದೀಯಾ ?" ಎಂದು ಕೇಳಿದನು.

ಅದಕ್ಕೆ ಹಿರಿಯ ಮಗನು, "ನಮಗಿರುವ ಗೇಣಗಲವೋ ಮೊಳ ಅಗಲವೋ ಇರುವ ಜಾಗ ನಮ್ಮ ಹೊಟ್ಟೆ ಬಟ್ಟೆಗಳಿಗೆ ಸಾಕಾಗುವುದಿಲ್ಲ ಅಂತ ಕಂಡರೆ, ಬೇರೆಯವರ ಹೊಲಗದ್ದೆಗಳನ್ನು ಗೇಣಿಗೆ ಗೆಯ್ಯಲು ತೆಗೆದುಕೊಳ್ಳೋಣ ಅಪ್ಪಾ" ಎಂದನು. ಮಗನು ಹೇಳಿದ ಆ ಉತ್ತರವನ್ನು ಕೇಳಿ ಪರಂಧಾಮಯ್ಯ

ವಿ. ಎಸ್. ನಾರಾಯಣ



ನೊಂದುಕೊಳ್ಳುತ್ತ, "ಈವರೆಗೆ ನಾವು ಸ್ವಂತ ವ್ಯವಸಾಯದಾರರಾದುದರಿಂದ ಊರೊಳಗೆ ಗೌರವದಿಂದಿದ್ದೇವೆ. ಇನ್ನು ಇದೇ ಊರಿನಲ್ಲಿ ಬೇರೆಯವರ ಹೊಲಗಳನ್ನು ಗೇಣಿಗೆ ತೆಗೆದುಕೊಂಡರೆ, ಅವರು ನಮ್ಮ ಧಣಿಗಳಾಗಿ, ನಮ್ಮನ್ನು ಗೌರವಿಸುತ್ತ, ಬಂದವರೇ ಅಧಿಕಾರ ತೋರಿಸಲು ತೊಡಗುತ್ತಾರೆ" ಎಂದನು.

ಅದಕ್ಕೆ ಹಿರಿಯ ಮಗನೇನೂ ಮಾತಾಡಲಿಲ್ಲ. ಪರಂಧಾಮಯ್ಯ ಉಳಿದ ಮೂವರು ಮಗಂದಿರನ್ನೂ ಕೇಳಿ ನೋಡಿದನು. ಅವರು ಕೂಡಾ ಹಿರಿಯ ಮಗನು ಹೇಳಿದ ಧೋರಣೆಯಲ್ಲೇ ಉತ್ತರ ಕೊಟ್ಟರು. ಮರದಿಂದ ಉದುರಿದ ಬೀಜಗಳು ನಾಲ್ಕು ದಿಕ್ಕುಗಳಿಗೂ ಹೋಗಿ ತಳವೂರಿದರೇನೇ ಬಲವಾದ ಮರಗಳು ಆಗುತ್ತವೆ. ಮರದ ಪಕ್ಕದಲ್ಲೇ ಬೆಳೆಯಬೇಕೆಂದರೆ ಅವುಗಳಿಗೆ ಬೇಕಾದಷ್ಟು ಆಹಾರವು ದೊರೆಯುವ ಸಾಧ್ಯತೆ ಇರಲಾರದಷ್ಟೆ? ಈ ವಾಸ್ತವವು ತನ್ನ ಮಕ್ಕಳಿಗೆ ಅರ್ಥವಾಗುವಂತೆ ಮಾಡುವುದು ಹೇಗೆಂದು ಪರಂಧಾಮಯ್ಯನು ಆಲೋಚಿಸಿದನು. ಕಡೆಗೆ ಏನೋ ಒಂದು ಯೋಚನೆಯಿಂದ ಒಂದು ದಿನ ಪಟ್ಟಣಕ್ಕೆ ಹೋದನು. ತಾನು ಹಿಂದಿರುಗಲು ಒಂದೆರಡು ದಿನ ಆಗಬಹುದೆಂದೂ ಮನೆಯಲ್ಲಿ ಹೇಳಿದ್ದನು.

ಮಾರನೆಯ ದಿನ ಒಬ್ಬ ಬೇಡರವನು ಪರಂಧಾಮಯ್ಯನ ಮನೆಗೆ ಬಂದನು. ಆಗ ಮನೆಯಲ್ಲಿ ಹಿರಿಯ ಮಗನಿದ್ದನು. ಅವನು ಬೇಡರವನ ಹತ್ತಿರ ಏನು ಕೆಲಸವೆಂದು ವಿಚಾರಿಸಿದನು.

"ಅಯ್ಯಾ, ನನಗೆ ಒಂದು, ಸಣ್ಣ ಬಿದಿರಿನ ಕಾಡು ಇದೆ. ಯಾರಾದರೂ ಬಿದಿರನ್ನು ಕಡಿದುಕೊಂಡು ಅಷ್ಟು ವಠಾರವನ್ನು ಖಾಲೀ ಮಾಡಿಕೊಟ್ಟರೇ ಸಾಕು. ಆ ಸ್ಥಳದಲ್ಲಿ ನಾನು ಮನೆ ಕಟ್ಟಿಕೊಂಡು ಕೆರೆ ತೋಡಿ ವಾಸಕ್ಕೆ ಯೋಗ್ಯ ಮಾಡಿಕೊಳ್ಳಬೇಕೆಂದಿದ್ದೇನೆ. ಬಿದಿರು ಉಚಿತವಾಗಿಯೇ ಕೊಟ್ಟುಬಿಡುತ್ತೇನೆ" ಎಂದನು.

ಹಿರಿಯ ಮಗನಲ್ಲಿ ಆಶೆ ಚಿಗುರಿತು. ಬೇಕಾದಷ್ಟು ಬಿದಿರು ಉಚಿತವಾಗಿ ಕಡಿದುಕೊಂಡರೆ, ಪಟ್ಟಣದಲ್ಲಿ ಅದಕ್ಕೆ ಒಳ್ಳೆಯ ಬೆಲೆಯಿದೆ. ಸ್ವಲ್ಪ ರವಾನೆಯ ಖರ್ಚು ಮಾತ್ರ ಮಾಡಿದರಾಯಿತು.

ಹೀಗೆ ಯೋಚಿಸಿ ಹಿರಿಯವನು ಬೇಡರವನೊಂದಿಗೆ ಹೋಗಿ, ಬಿದಿರು ಕಡಿಸಿ ಅವುಗಳನ್ನು ಪಟ್ಟಣಕ್ಕೆ ಸೇರಿಸಿದನು. ಅಲ್ಲಿ ಅವನು ಅದನ್ನು ಮಾರಲು ನೋಡುವಾಗ ಪರಂಧಾಮಯ್ಯನ ಎರಡನೇ ಮಗನು ಅಲ್ಲಿಗೆ ಬಂದನು.

"ಅಣ್ಣಾ, ಬಿದಿರನ್ನು ಮಾರಬೇಡ. ಅವುಗಳನ್ನು ಸೀಳಿಸಿ ಸಲಿಕೆಗಳಾಗಿ ಮಾಡಿದರೆ ಒಬ್ಬ ವರ್ತಕನು ಕೊಂಡುಕೊಳ್ಳಲು ಸಿದ್ಧನಾಗಿದ್ದಾನೆ" ಎಂದನು.

ಅಣ್ಣ ತಮ್ಮಂದಿರು ಬಿದಿರನ್ನು ಸೀಳಿಸಿದರು. ಮರುದಿನ ಅವುಗಳನ್ನು ಒಯ್ಯಲು ವರ್ತಕನೂ ತಯಾರಾಗಿ ಬಂದನು. ಆಗಲೇ ಗ್ರಾಮದಿಂದ

ಪರಂಧಾಮಯ್ಯನ ಮೂರನೇ ಮಗನು ಅಲ್ಲಿಗೆ ಬಂದು, ಬಹಳ ಉತ್ಸಾಹದಿಂದ, "ಅಣ್ಣಂದಿರಾ. ಇಷ್ಟು ಚೆಂದಾಗಿ ಸೀಳಿಸಿದ ಬಿದಿರು ಸಲಿಕೆಗಳನ್ನು ಅಗ್ಗಕ್ಕೆ ಮಾರಿಗೀರಿ ಬಿಡಬೇಡಿ. ಇವುಗಳನ್ನು ಬಿದಿರಿನ ತಡಿಕೆಗಳಾಗಿಯೂ, ಬೇರೆ ಬೇರೆ ಬುಟ್ಟಿಗಳಾಗಿಯೂ ಹೆಣೆಯಿಸಲಿಕ್ಕೆ ಒಬ್ಬ ವರ್ತಕನು ಬಂದಿದ್ದಾನೆ. ಅವೆಲ್ಲಾ ತಯಾರಾದ ಮೇಲೆ ಅವನೇ ಒಳ್ಳೆಯ ಬೆಲೆಗೆ ಮಾರಾಟಮಾಡಿ ಕೊಡುತ್ತಾನಂತೆ" ಎಂದನು.

ಬಿದಿರಿನ ತಡಿಕೆಗಳೂ. ಬುಟ್ಟಿಗಳೂ ಹೆಣೆಯಲ್ಪಟ್ಟು ತಯಾರಾಗತೊಡಗಿದುವು. ಅವುಗಳನ್ನು ತೆಗೆದುಕೊಂಡು ಹೋಗಲು ವರ್ತಕನು ಬರುವ ಹೊತ್ತಿಗೆ ಪರಂಧಾಮಯ್ಯನ ನಾಲ್ಕನೇ ಮಗನು ಅಲ್ಲಿಗೆ ಬಂದು, "ಅವುಗಳನ್ನು ನಾವೇ ಮಾರಿಬಿಟ್ಟರೆ ಆ ಲಾಭಗಳೆಲ್ಲ ನಮಗೇ ದಕ್ಕುತ್ತವೆ. ಆ ಕೆಲಸ ನಾನು ಮಾಡುತ್ತೇನೆ, ಅಣ್ಣಗಳಿರಾ" ಎಂದನು.

ಕಡೆಗೆ ನಾಲ್ವರು ಅಣ್ಣ ತಮ್ಮಂದಿರೂ ಕೂಡಿ ಅವುಗಳನ್ನು ಒಳ್ಳೆಯ ಬೆಲೆಗೆ ಸಂತೆಯಲ್ಲಿ ಮಾರಿದರು. ಈಗಾಗಲೇ ಗಳಿಸಿಕೊಂಡ ಅನುಭವಗಳಿಂದ, ವ್ಯಾಪಾರವು ಅಷ್ಟೇನೂ ದೊಡ್ಡ ಕಷ್ಟದ ವೃತ್ತಿಯಲ್ಲವೆಂದು ಅವರಿಗೆ ಗೊತ್ತಾಗಿತ್ತು. ಬಾಧ್ಯತೆಯನ್ನು ನಾಲ್ವರೂ ಹಂಚಿಕೊಂಡು, ಸ್ವಲ್ಪ ಕಾಲದಲ್ಲಿ ಅವರು ಬಿದಿರು ವರ್ತಕದಲ್ಲಿ ಒಳ್ಳೆಯ ಹೆಸರನ್ನೂ ಲಾಭವನ್ನೂ ಸಂಪಾದಿಸತೊಡಗಿದರು. ಕಡೆಗೆ ಲಾಭದ ಹಣವನ್ನು ಅವರು ಹಂಚಿಕೊಳ್ಳುವಾಗ ಪರಂಧಾಮಯ್ಯ ಬಂದು, "ನೀವು ಲಾಭ ಹಂಚಿಕೊಳ್ಳುವ ಮೊದಲು, ಬಿದಿರಿನ ಮೂಲ ಬೆಲೆಯನ್ನು ಒಂದು ಬದಿಯಲ್ಲಿಡಿರಿ" ಎಂದನು.

ಮಗಂದಿರು ಆಶ್ಚರ್ಯದಿಂದ, "ಬಿದಿರಿನ ಬೆಲೆ ಏನಿದೆ? ಅದು ಉಚಿತವಾಗಿಯೇ ಬಂದಿತಲ್ಲ!" ಎಂದರು.

ಪರಂಧಾಮಯ್ಯ ನಕ್ಕು, "ಬೇಡರವನು ಉಚಿತವಾಗಿ ಕೊಟ್ಟದ್ದು ನಿಜವೇ. ಆದರೆ ನಾವು ಮತ್ತೆ ಬಿದಿರು ಸಂಪಾದಿಸಲು ಬೆಲೆ ಕೊಟ್ಟೇ ಕೊಂಡುಕೊಳ್ಳಬೇಕಷ್ಟೆ?" ಎಂದನು.

ನಾಲ್ವರೂ ಆಲೋಚಿಸಿ ಹೌದೆಂದು ಒಪ್ಪಿಕೊಂಡರು.

ಆದರೆ ಪರಂಧಾಮಯ್ಯ ಮಗಂದಿರ ಮುಂದೆ ಒಂದು ರಹಸ್ಯ ಒಡೆಯಲೇ ಇಲ್ಲ. ಮೊತ್ತ ಮೊದಲು ಹಿರಿಯ ಮಗನಿಗೆ ಬಿದಿರು ಕೊಟ್ಟ ಬೇಡರವನಿಗೆ ಪರಂಧಾಮಯ್ಯ ಬಿದಿರಿನ ಬೆಲೆ ಕೊಟ್ಟಿದ್ದರು. ತರುವಾಯ ವರ್ತಕರೆಂದು ಅಣ್ಣ ತಮ್ಮಂದಿರ ಮುಂದೆ ಬಂದವರೆಲ್ಲರೂ ಪರಂಧಾಮಯ್ಯ ಹೇಳಿಕೊಟ್ಟಂತೆ ಮಾಡಿದ ಅವನ ಪಟ್ಟಣದ ಮಿತ್ರರೇ.





# ದಾನಪಾತ್ರ

ಒಂದು ಕಾಲದಲ್ಲಿ ಬೋಧಿಸತ್ವನು ಕಾಶೀ ರಾಜನಾಗಿ ಜನ್ಮವೆತ್ತಿದನು. ಆತನು ಧರ್ಮ ನ್ಯಾಯಗಳ ತಳಹದಿಯಲ್ಲಿ ರಾಜ್ಯಪಾಲನೆ ಮಾಡಿಕೊಂಡಿದ್ದ ಕಾಲದಲ್ಲಿ ಸರಿಹದ್ದು ಪ್ರಾಂತದಲ್ಲಿ ಕೆಲವರು ಪಿತೂರಿ ನಡೆಸಿ ಬಂಡಾಯವೆಬ್ಬಿಸಿದರು. ಆ ಪಿತೂರಿದಾರರನ್ನೂ, ಬಂಡಾಯವನ್ನೂ ಅಡಗಿಸಲು ರಾಜನು ಸ್ವಲ್ಪ ಸೇನೆಯೊಂದಿಗೆ ಆ ಪ್ರಾಂತಕ್ಕೆ ಹೋದನು, ಅಲ್ಲಿ ರಾಜನಿಗೂ ಬಂಡಾಯದ ಗುಂಪಿನವರಿಗೂ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ರಾಜನಿಗೆ ದೊಡ್ಡ ಗಾಯಗಳಾದುವು. ಅವನು ಏರಿಕೊಂಡಿದ್ದ ಕುದುರೆ ಹೆದರಿ ಅವನನ್ನು ಹೊತ್ತುಕೊಂಡು ಯುದ್ಧರಂಗದಿಂದ ಓಡಿಹೋಯಿತು.

ಸ್ವಲ್ಪ ಹೊತ್ತಿಗೆ ರಾಜನು ಕುದುರೆಯೊಂದಿಗೆ ಸರಿಹದ್ದು ಪ್ರಾಂತದ ಒಂದಾನೊಂದು ಗ್ರಾಮದ ಮೇರೆಗೆ ಹೋಯಿತು. ಅಲ್ಲಿ ಗ್ರಾಮದೊಳಗಿನ ಮೂವತ್ತು ಮನೆಯವರು ಗ್ರಾಮದ ಕಟ್ಟೇ ಮೈದಾನದಲ್ಲಿ ಒಂದುಗೂಡಿ, ಗ್ರಾಮ ವ್ಯವಹಾರಗಳನ್ನು ಚರ್ಚಿಸಿಕೊಂಡಿದ್ದರು. ಥಕ್ಕನೆ ಕತ್ತಿ, ಢಾಲು, ಕವಚಗಳನ್ನು ಧರಿಸಿ, ಯೋಧನ ವೇಷದಲ್ಲಿ ರಾಜನು ಅಲ್ಲಿ ಪ್ರತ್ಯಕ್ಷನಾದ ಕೂಡಲೇ ಕಟ್ಟೇ ಮೈದಾನದಲ್ಲಿ ಸೇರಿದವರೆಲ್ಲಾ ಹೆದರಿ ಚೆಲ್ಲಾಚೆದರಾಗಿ ಓಡಿಹೋದರು. ಒಬ್ಬನೇ ಒಬ್ಬ ಗ್ರಾಮಸ್ಥನು ಮಾತ್ರ ಕದಲದೆ ಅಲ್ಲೇ ನಿಂತಿದ್ದನು.

ಅವನು ಆಯಾಸದಿಂದಿರುವ ರಾಜನ ಹತ್ತಿರ ಬಂದು, ನಖಶಿಖಾಂತವಾಗಿ ಒಮ್ಮೆ ನೋಡಿ, ಯುದ್ಧರಂಗದಿಂದ ಬಂದವನೆಂದು ತಿಳಿದು, "ನೀನು ಬಂಡಾಯದ ಕಡೆಯವನೋ, ರಾಜನ ಪಕ್ಷದವನೋ ?" ಎಂದು ಪ್ರಶ್ನಿಸಿದನು.

"ಅಯ್ಯಾ, ನಾನು ರಾಜನ ಪಕ್ಷದವನೇ !" ಎಂದು ರಾಜನು ಉತ್ತರ ಕೊಟ್ಟನು.

ಆ ಮಾತನ್ನು ಕೇಳಿ ಗ್ರಾಮಸ್ಥನು ತೃಪ್ತಿಯನ್ನು ವ್ಯಕ್ತಪಡಿಸಿ, "ಹಾಗಾದರೆ ನಮ್ಮ ಮನೆಗೆ ಹೋಗೋಣ, ಬಾ" ಎಂದು ರಾಜನನ್ನು ಆದರದಿಂದ ತನ್ನ ಮನೆಗೆ ಕರೆದುಕೊಂಡು ಹೋದನು. ಅವನನ್ನು ಅತಿಥಿ ಎಂದು ಭಾವಿಸಿ, ಹೆಂಡತಿಯಿಂದ ನೀರು ಹಾಕಿಸಿ, ಅವನ ಕಾಲು ತೊಳೆಯಿಸಿದನು.

ಒಳ್ಳೆಯ ಊಟ ಹಾಕಿಸಿ, ಗಾಯಗಳಿಗೆ ಔಷಧ ಕೊಟ್ಟನು. ಅವನಿಗೆ ಬೇಕಾದ ಎಲ್ಲಾ ಮರ್ಯಾದೆ

ಗಳನ್ನೂ ಮಾಡಿಸಿದನು. ರಾಜನು ಏರಿ ಬಂದ ಕುದುರೆಗೆ ತಾನೇ ಸ್ವತಃ ನೀರು ಕುಡಿಯಲಿಟ್ಟು, ದಾಣಿಯನ್ನೂ ತಿನ್ನಲಿತ್ತನು.

ರಾಜನು ಆ ಗ್ರಾಮಸ್ಥನ ಮನೆಯಲ್ಲಿ ನಾಲ್ಕು ದಿನಗಳವರೆಗಿದ್ದನು. ಗಾಯದ ನೋವು ವಾಸಿಯಾಯಿತು. ಆಮೇಲೆ ಗ್ರಾಮಸ್ಥನಿಗೆ ತನ್ನ ಕೃತಜ್ಞತೆ ಹೇಳಿಕೊಂಡು, ಅಲ್ಲಿಂದ ಹೊರಡುವಾಗ, "ಅಯ್ಯಾ, ನಾನು ಕಾಶೀ ನಗರದಲ್ಲಿರುವವನು. ನನ್ನ ಮನೆ ಕೋಟೆಯೊಳಗೆ ಇರುತ್ತದೆ. ನನಗೆ ಒಬ್ಬಳು ಹೆಂಡತಿಯೂ ಇಬ್ಬರು ಕುಮಾರರೂ ಇದ್ದಾರೆ. ನೀವು ಕಾಶೀ ನಗರಕ್ಕೆ ಬಂದು, ಕೋಟೆಯ ಬಲ ಭಾಗದಲ್ಲಿರುವ ಉತ್ತರ ದಿಕ್ಕಿನ ದ್ವಾರದ ಹತ್ತಿರವಿರುವ ಕಾವಲಿನವನ ಹತ್ತಿರ, ಮಹಾಶ್ವಾರೋಹನ ಮನೆ ಎಲ್ಲಿದೆ ಎಂದು ಕೇಳಿದರೆ ಅವನು ನಿಮ್ಮನ್ನು ನೆಟ್ಟಗೆ ನನ್ನ ಮನೆಗೆ ಕರೆದುಕೊಂಡು ಬರುತ್ತಾನೆ. ನೀವು ನಿಮಗೆ ಇಷ್ಟ ಬಂದಷ್ಟು ಕಾಲ ನನ್ನ ಅತಿಥಿಯಾಗಿರಬೇಕು" ಎಂದು ಹೇಳಿದನು.

ರಾಜನು ಅಲ್ಲಿಂದ ಹೊರಡುವುದರೊಳಗೆ ಅವನ ಸೈನಿಕರು ಬಂಡಾಯವನ್ನು ಅಡಗಿಸಿ ಪಿತೂರಿಗಾರರನ್ನು ಸೆರೆಹಿಡಿದು, ಶಾಂತಿ ನೆಲೆಸುವಂತೆ ಮಾಡಿದ್ದರು. ರಾಜನು ಹೋಗಿ ತನ್ನ ಸೈನ್ಯವನ್ನು ಸೇರಿಕೊಂಡು ಕಾಶೀ ನಗರಕ್ಕೆ ಹೊರಟುಹೋದನು. ಅವನು ಉತ್ತರ ದಿಕ್ಕಿನ ದ್ವಾರಪಾಲಕನನ್ನು ಕರೆಯಿಸಿ, ಅವನೊಂದಿಗೆ ರಹಸ್ಯವಾಗಿ, "ಎಲೋ, ಯಾರಾದರೂ ನಿನ್ನ ಬಳಿಗೆ ಬಂದು 'ಮಹಾಶ್ವಾರೋಹನ ಮನೆ ಎಲ್ಲಿದೆ?' ಎಂದು ಕೇಳಿದರೆ, ಆ ಮನುಷ್ಯನನ್ನು ಗೌರವಪೂರ್ವಕವಾಗಿ ನನ್ನ ಬಳಿಗೆ ಕರೆದುಕೊಂಡು ಬರಬೇಕು. ನೆನಪಿಟ್ಟುಕೋ!" ಎಂದು ಒತ್ತಿ ಹೇಳಿದನು.

ಆ ಗ್ರಾಮಸ್ಥನು ಬರುವನೆಂದು ರಾಜನು ಅನೇಕ ದಿನಗಳವರೆಗೆ ಇದಿರು ನೋಡಿದನು. ಎಷ್ಟು ದಿನ



ಗಳಾದರೂ ಅವನು ಬರಲೇ ಇಲ್ಲ. ಅವನನ್ನು ಯಾವ ವಿಧದಿಂದಲಾದರೂ ಬರಮಾಡಿಸಿಕೊಳ್ಳಬೇಕೆಂಬ ಉದ್ದೇಶದಿಂದ, ರಾಜನು ತನ್ನ ಮಂತ್ರಿಗಳ ಮೂಲಕವಾಗಿ ಆ ಸರಿಹದ್ದು ಗ್ರಾಮದ ಮೇಲೆ ಹೊಸ ತೆರಿಗೆಯನ್ನು ಹಾಕಿಸಿದನು. ಆಗಲೂ ಗ್ರಾಮಸ್ಥನು ರಾಜನ ಬಳಿಗೆ ಬರಲಿಲ್ಲ. ಮತ್ತೆ ಸ್ವಲ್ಪಕಾಲ ನೋಡಿದ ಮೇಲೆ, ರಾಜನು ಅಲ್ಲಿಗೆ ಮತ್ತೊಂದು ಕಂದಾಯವನ್ನು ಹೆಚ್ಚಿಸಿದನು. ಈ ವಿಧವಾಗಿ ಎರಡು ಮೂರು ಸಾರಿ ನಡೆದ ಮೇಲೆ ಆ ಗ್ರಾಮದ ಜನರು, ರಾಜನಿಗೆ ಉಪಚಾರ ಮಾಡಿದ ಗ್ರಾಮಸ್ಥನೊಂದಿಗೆ, "ಮೇಲಿಂದ ಮೇಲೆ ಬೀಳುವ ಈ ತೆರಿಗೆ ಸುಂಕ ಕಂದಾಯಗಳಿಂದ ನಾವು ಸಾಯುತ್ತೇವೆ. ಕಾಶೀ ನಗರದಲ್ಲಿ ನಿನ್ನ ಮಿತ್ರನೊಬ್ಬ ರಾಜಾಸ್ಥಾನದಲ್ಲಿರುವನೆಂದು ಹೇಳುವಿಯಷ್ಟೆ? ನೀನು ಒಂದು ಸಾರಿ ಹೋಗಿ ಅವನನ್ನು ನೋಡಿ, ಈ ತೆರಿಗೆಗಳಿಂದ ನಾವೆಲ್ಲಾ ಪಡುವ ಕಷ್ಟ

ರಾಜನಿಗೆ ಗೊತ್ತಾಗುವ ಹಾಗೆ ಮಾಡಬಾರದೇ ?" ಎಂದು ಒತ್ತಾಯಿಸತೊಡಗಿದರು.

"ಆ ನನ್ನ ಸ್ನೇಹಿತನನ್ನು ಹೋಗಿ ನೋಡಿ ಮಾತಾಡುವುದೇನೂ ಕಷ್ಟವಿಲ್ಲ. ಆದರೆ ಆತನ ಬಳಿಗೆ ಬರಿಗೈಯಿಂದ ಹೇಗೆ ಹೋಗಲಿ ? ಅವನಿಗೆ ಒಬ್ಬಳು ಹೆಂಡತಿ ಇರುವಳಂತೆ. ಇಬ್ಬರು ಮಕ್ಕಳಿದ್ದಾರೆಂದಿದ್ದಾನೆ. ಅವರಿಗೆಲ್ಲ ಬಟ್ಟೆಗಳನ್ನು ತೆಗೆದುಕೊಂಡು ಹೋಗಬೇಡವೆ ? ಅವನ ಹೆಂಡತಿಗೆ ಕಾಣಿಕೆಯಾಗಿ ನಗನಟ್ಟು ಏನಾದರೂ ಒಯ್ಯಬೇಡವೆ ? ನೀವೆಲ್ಲಾ ಇದನ್ನು ಯೋಚಿಸಿ ಅವುಗಳನ್ನೆಲ್ಲಾ ಸಿದ್ಧಗೊಳಿಸಿ ತರುವಿರಾದರೆ ನಾನು ಹೋಗಿ ಮಾತಾಡಿ ಬರುತ್ತೇನೆ" ಎಂದನು ಆ ಗ್ರಾಮಸ್ಥ.

ಊರ ಜನರೆಲ್ಲಾ ಸೇರಿ ಕಾಣಿಕೆಗಾಗಿ ಕೆಲವು ನಗಗಳನ್ನೂ ಹೊಸ ಬಟ್ಟೆಗಳನ್ನೂ ತಂದು ಆ ಗ್ರಾಮಸ್ಥನಿಗೆ ಕೊಟ್ಟರು. ಅವೆಲ್ಲಾ ಆ ಗ್ರಾಮಸ್ಥರಿಗೆ ಉಪಯೋಗವಾಗುವಂತಹ ಸಾಧಾರಣ ಮೊರಟು ವಸ್ತುಗಳೇ ಆಗಿದ್ದುವು. ಹೊರಡುವ ಮೊದಲು ಗ್ರಾಮಸ್ಥನ ಹೆಂಡತಿ, ರೊಟ್ಟಿಗಳನ್ನೂ, ಆ ಗ್ರಾಮದ ವಿಶೇಷ ಭಕ್ಷ್ಯಗಳಾದ ಉಂಡೆ ಚಕ್ಕುಲಿಗಳಂತಹವುಗಳನ್ನೂ ಮಾಡಿಕೊಟ್ಟಳು. ಅವುಗಳನ್ನೆಲ್ಲ ಮೂಟೆ ಕಟ್ಟಿಕೊಂಡು ಗ್ರಾಮಸ್ಥನು ಕಾಶೀ ರಾಜಧಾನಿಗೆ ಹೊರಟನು.

ಕೆಲವು ದಿನಗಳ ಮೇಲೆ ಅವನು ಕಾಶೀ ನಗರದ ಕೋಟೆಯ ಬಳಿಗೆ ಬಂದು, ಬಲಭಾಗದಲ್ಲಿರುವ ಉತ್ತರ ದ್ವಾರದ ಬಳಿಗೆ ಹೋಗಿ. ಅಲ್ಲಿದ್ದ ದ್ವಾರಪಾಲಕನ ಹತ್ತಿರ, "ಅಪ್ಪಾ, ನಾನು ಮಹಾಶ್ವಾರೋಹರ ಬಳಿಗೆ ಹೋಗಬೇಕಾಗಿದೆ. ದಾರಿ ಹೇಗೆ ?" ಎಂದು ಕೇಳಿದನು.

ತತ್‌ಕ್ಷಣವೇ ದ್ವಾರಪಾಲಕನು ಆ ಗ್ರಾಮಸ್ಥನಿಗೆ ಕೈಮುಗಿದು ಗೌರವ ತೋರಿಸಿ, ತನ್ನೊಂದಿಗೆ ಕರೆದುಕೊಂಡು ರಾಜನ ಬಳಿಗೆ ಹೋದನು.

ಅವನನ್ನು ನೋಡಿ ರಾಜನಿಗಾದ ಸಂತೋಷಕ್ಕೆ ಪಾರವಿರಲಿಲ್ಲ. ಆ ಗ್ರಾಮಸ್ಥನು ತನಗಾಗಿ ತಂದ ತಿಂಡಿಗಳನ್ನು ತನ್ನ ಹೆಂಡತಿಯಿಂದಲೂ ಕುಮಾರ



ರಿಂದಲೂ, ತನ್ನ ಮಂತ್ರಿ ಸಾಮಂತರಿಂದಲೂ ತಿನ್ನಿಸಿ, ತಾನೂ ಕೂಡಾ ತಿಂದನು. ಅವನು ತಂದ ಮೊರಟು ಹೊಸ ಬಟ್ಟೆಗಳನ್ನು ಹೆಂಡತಿ ಮಕ್ಕಳಿಂದ ಉಡಿಸಿದನು. ಆಮೇಲೆ ಅವನು ತನ್ನ ಅತಿಥಿಗೆ ಮೇಲಾದ ಪಟ್ಟೆ ಬಟ್ಟೆಗಳನ್ನು ಉಡಲು ಕೊಟ್ಟು, ತನ್ನ ಪಾಕಶಾಲೆಯಲ್ಲಿ ತಯಾರಾದ ದಿವ್ಯ ಭೋಜನವನ್ನು ಅವನಿಗೆ ಹಾಕಿಸಿದನು, ತನ್ನ ಗ್ರಾಮದ ಮೇಲೆ ಹಾಕಿಸಿದ ತೆರಿಗೆಗಳನ್ನು ತೆಗೆಯಿಸಲಿಕ್ಕಾಗಿಯೇ ಅವನು ಬಂದಿರುವನೆಂದು ತಿಳಿದು, ಆ ಹೆಚ್ಚಿನ ತೆರಿಗೆಗಳನ್ನೆಲ್ಲಾ ತೆಗೆಸಿ ಹಾಕುವಂತೆ ತನ್ನ ಮಂತ್ರಿಗಳಿಗೆ ಆಜ್ಞೆ ಮಾಡಿದನು. ಅನಂತರ ರಾಜನು ದೊಡ್ಡ ಸಭೆ ನೆರೆಸಿದನು. ಆ ಮಹಾ ಸಭೆಯಲ್ಲಿ ಮಂತ್ರಿ ಸಾಮಂತಾದಿಗಳ ಸಮಕ್ಷಮದಲ್ಲಿ ಆ ಗ್ರಾಮಸ್ಥನನ್ನು ತನ್ನ ಅರ್ಧ ರಾಜ್ಯಕ್ಕೆ ರಾಜನಾಗಿ ಮಾಡಿ ಪ್ರಕಟಪಡಿಸಿದನು.

ಯಾವನೋ ಒಬ್ಬ ಗ್ರಾಮಸ್ಥನು ಬಂದ ಕ್ಷಣದಿಂದಲೂ ರಾಜನು ಅವನ ಮೇಲೆ ತೋರಿಸಿಕೊಂಡು ಬಂದ ಆದರೋಪಚಾರಗಳು ಮಂತ್ರಿ ಮೊದಲಾದವರಿಗೆ ಹಿಡಿಸಲಿಲ್ಲ. ಅವನಿಗೆ ಅರ್ಧ ರಾಜ್ಯದ ಪಟ್ಟ ಕಟ್ಟಿದುದಂತೂ ಅವರ ದೃಷ್ಟಿಯಲ್ಲಿ ಬಹಳ ಅವಿವೇಕದ ಕೆಲಸವಾಗಿ ತೋರಿತು. ಗ್ರಾಮಸ್ಥನು ಬೇಡವೆಂದರೂ ರಾಜನೇ ಒತ್ತಾಯಿಸಿ ಕೊಡುವುದೆಂದರೆ, ಭಾವಾತಿರೇಕವಲ್ಲದೆ ಮತ್ತೇನನ್ನಬೇಕು ?

ಆದರೆ ರಾಜನೊಂದಿಗೆ ಇದಿರಾಗಿ ಮಾತಾಡುವ ಸಾಹಸ ಅವರಾರಿಗೂ ಇರಲಿಲ್ಲ. ಆದುದರಿಂದ ಅವರು ರಾಜಕುಮಾರನನ್ನು ಸಂಧಿಸಿ, "ಅಪ್ಪಾ, ಯುವರಾಜಾ, ಮಹಾರಾಜರು ನಿನಗೆ ಬಹಳ ಅನ್ಯಾಯ ಮಾಡುತ್ತಾರೆ. ನಿನಗೆ ಬರಬೇಕಾಗಿದ್ದ ರಾಜ್ಯದ ಅರ್ಧ ಭಾಗವನ್ನು ಕಾರಣವೇನಿಲ್ಲದೆ ಅನಾಗರಿಕನೊಬ್ಬನಿಗೆ ಕೊಡುತ್ತಿದ್ದಾರೆ. ಅದಕ್ಕಾಗಿ ಮಹಾರಾಜರ ಹತ್ತಿರ ಆಕ್ಷೇಪಿಸಬೇಕಾದವನು ನೀನೇ ! ಸಮಯ ಮಿಂಚಿ ಹೋಗಿಲ್ಲ" ಎಂದು ಚೆನ್ನಾಗಿ ಬೋಧಿಸಿದರು. ಅದೆಲ್ಲ ನ್ಯಾಯವೆಂದೇ ತೋರಿದುದರಿಂದ ರಾಜಕುಮಾರನು ತಂದೆಯ ಹತ್ತಿರ



ಹೋಗಿ, ಅವರು ಹೇಳಿದ ಪ್ರಕಾರ ಆ ದಾನದ ವಿಷಯ ದಲ್ಲಿ ತನ್ನ ಆಕ್ಷೇಪಣೆಯನ್ನು ಹೇಳಿಕೊಂಡನು.

ಅದನ್ನೆಲ್ಲ ಕೇಳಿ ರಾಜನು ಮುಗುಳ್ನಗುತ್ತ, "ಕುಮಾರಾ, ಇದು ನಿನ್ನಲ್ಲಿ ಹುಟ್ಟಿದ ಆಲೋಚನೆ ಯಂತೂ ಅಲ್ಲ. ನನ್ನ ಹತ್ತಿರ ಈಗ ನೀನು ಹೇಳಿದ ಹಾಗೆಯೇ ತುಂಬಿದ ಸಭೆಯಲ್ಲಿ ಕೇಳು. ಆಗ ತಕ್ಕ ಸಮಾಧಾನವನ್ನು ಹೇಳುತ್ತೇನೆ" ಎಂದನು.

ರಾಜಕುಮಾರನು ಆ ಪ್ರಕಾರವೇ ಸಭೆಯಲ್ಲಿ ತನ್ನ ತಂದೆಯೊಂದಿಗೆ, "ಈ ಗ್ರಾಮಸ್ಥನಿಗೆ ನೀವು ಮಾಡಿದ ಉಪಚಾರಗಳಿಗೆ ನಾನೇನೂ ಆಕ್ಷೇಪಿಸು ವುದಿಲ್ಲ. ಆದರೆ ಅವನಿಗೆ ನೀವು ಅರ್ಧ ರಾಜ್ಯ ವನ್ನೇ ಕೊಟ್ಟುದರ ಕಾರಣ ಏನೆಂದು ಗೊತ್ತಾಗಲಿಲ್ಲ. ಅದನ್ನು ಆಕ್ಷೇಪಿಸುವ ಅರ್ಹತೆ ನನಗೆ ಉಂಟೆಂದು ತಿಳಿಯುತ್ತೇನೆ" ಎಂದನು. ಅದಕ್ಕೆ ರಾಜನು, "ಕುಮಾರಾ, ನೀನು ಆಕ್ಷೇಪಿಸುವುದು ತಪ್ಪೆಂದು ನಾನು ಹೇಳುವುದಿಲ್ಲ. ಒಂದು ಕಾಲದಲ್ಲಿ ಈ ಗ್ರಾಮಸ್ಥನು ನನ್ನ ಪ್ರಾಣವನ್ನು ಕಾಪಾಡಿ ರಕ್ಷಣೆ ನೀಡಿದ್ದಾನೆ. ಆ ಸಮಾಚಾರ ನಿನಗೆ ತಿಳಿಯದು" ಎಂದು ಸರಿಹದ್ದಿನಲ್ಲಿ ನಡೆದ ಬಂಡಾಯದ ಸಂದರ್ಭ ದಲ್ಲಿ, ದೊಡ್ಡ ಗಾಯಗಳಿಂದಿದ್ದ ತನಗೆ ಗ್ರಾಮಸ್ಥನು ಮಾಡಿದ ಉಪಚಾರಗಳನ್ನೆಲ್ಲಾ ವಿವರಿಸಿ ಹೇಳಿದನು. ಅನಂತರ ಹೀಗೆಂದನು :

"ಅಪಾತ್ರನಿಗೆ ದಾನ ಮಾಡುವುದು ಎಷ್ಟು ದೊಡ್ಡ ತಪ್ಪೋ ಸುಪಾತ್ರನಿಗೆ ದಾನ ಮಾಡದೇ ಹೋಗುವುದು ಕೂಡಾ ಅಷ್ಟೇ ದೊಡ್ಡ ತಪ್ಪು. ನಾನು ರಾಜನೆಂಬುದನ್ನು ಅರಿಯದೆ ಈ ಗ್ರಾಮ ಸ್ಥನು ಪ್ರತಿಫಲಾಪೇಕ್ಷೆ ಏನೊಂದೂ ಇಲ್ಲದೆ ಮನಃ ಪೂರ್ವಕವಾಗಿ ನನ್ನನ್ನು ಉಪಚರಿಸಿದ್ದಾನೆ. ನಾನು ಬರಬೇಕೆಂದು ಕರೆ ನೀಡಿದ್ದರೂ, ಪ್ರತ್ಯುಪಕಾರ ಪಡೆಯುವ ಉದ್ದೇಶ ಸ್ವಲ್ಪವೂ ಇಲ್ಲದ್ದರಿಂದ ಅವನು ಬರಲೇ ಇಲ್ಲ. ಕಡೆಗೆ ಊರವರ ಕ್ಷೇಮಕ್ಕಾಗಿ ಮಾತ್ರ ಹೊರಟು ಬಂದಿದ್ದಾನೆ. ಅದೂ ತನ್ನ ಮಟ್ಟದಲ್ಲಿ ಅಮೂಲ್ಯವೆನಿಸುವ ಕಾಣಿಕೆಗಳೊಂದಿಗೆ! ಪರೋಪ ಕಾರದ ಹೊರತು, ಸ್ವಾರ್ಥವು ಸ್ವಲ್ಪವೂ ಇವನಲ್ಲಿಲ್ಲ. ಈಗ ಹೇಳು. ನನ್ನ ಅರ್ಧ ರಾಜ್ಯಕ್ಕೆ ಇದಕ್ಕಿಂತ ಹೆಚ್ಚಿನ ಅರ್ಹರು ಯಾರು?"

ರಾಜನು ಹೇಳಿದ ಮಾತುಗಳನ್ನು ಕೇಳಿ, ಮಂತ್ರಿ ಸಾಮಂತರೆಲ್ಲರೂ ನಾಚಿಕೊಂಡರು. ರಾಜಕುಮಾ ರನು ತಾನು ಮಾಡಿದ ತಪ್ಪನ್ನು ತಿಳಿದುಕೊಂಡನು. ತಂದೆಯ ಮಾತುಗಳು ಅವನನ್ನು ಬಹಳ ಸಂತೋಷ ದಲ್ಲಿ ತೇಲಿಸಿತು.

ಅಂದಿನಿಂದ ರಾಜನು ತನ್ನ ಜೀವಿತಾಂತದ ವರೆಗೂ ಆ ಗ್ರಾಮಸ್ಥನನ್ನು ಬಹಳ ಆದರದಿಂದ ನೋಡಿಕೊಂಡಿದ್ದನು.





## ಮೊಗಲ್ ಸಾಮ್ರಾಜ್ಯ ಪತನ

ಮಹಾರಾಷ್ಟ್ರರ ವಿಜೃಂಭಣೆಯನ್ನು ಅಡಗಿಸುವ ಪ್ರಯತ್ನದಲ್ಲಿ ಔರಂಗಜೇಬನು ತನ್ನ ಪರಿಪಾಲನೆಯ ಕಾಲದಲ್ಲಿ ಒಟ್ಟು ಇಪ್ಪತ್ತಾರು ವರ್ಷಗಳನ್ನು ದಕ್ಷಿಣದಲ್ಲಿ ಕಳೆಯಬೇಕಾಗಿ ಬಂತು. ಅವನು ರಾಜಧಾನಿಯಲ್ಲಿ ಇಲ್ಲದೆ ಹೋದುದರಿಂದ ಪರಿಪಾಲನೆಯ ವ್ಯವಹಾರಗಳು ಕುಂಠಿಸಿದುವು. ಅಕ್ಬರ್ ಎಂಬ ಅವನ ಮಗನು ತಂದೆಗೆ ಇದಿರು ತಿರುಗಿ ಪರ್ಷಿಯಾಕ್ಕೆ ಓಡಿಹೋದನು. ಈ ಪರಿಸ್ಥಿತಿಯಿಂದ ತುಂಬಾ ದುಃಖಿತನಾದ ಔರಂಗಜೇಬನು ೧೭೦೭ ರಲ್ಲಿ ಅಹ್ಮದ್ ನಗರದಲ್ಲಿ ತೀರಿಹೋದನು.

ಅವನ ಕುಮಾರರ ನಡುವಿನಲ್ಲಿದ್ದ ವಿರೋಧವು ರಕ್ತಪಾತಕ್ಕೆ ದಾರಿ ತೆಗೆಯಿತು. ಹಿರಿಯ ಮಗನು ಇಬ್ಬರು ತಮ್ಮಂದಿರನ್ನು ಕೊಂದು ಬಹದೂರ್ ಷಾ ಎಂಬ ಹೆಸರಿನಲ್ಲಿ ಸಿಂಹಾಸನವನ್ನು ಆಕ್ರಮಿಸಿಕೊಂಡನು. ೧೭೧೨ ರಲ್ಲಿ ಅವನು ತೀರಿಹೋದ ಮೇಲೆ, ಅವನ ಹಿರಿಯ ಮಗ ಜಹಾಂದರ್ ಷಾ ತನ್ನ ಮೂವರು ತಮ್ಮಂದಿರನ್ನು ಕೊಂದು ತನ್ನನ್ನು ರಾಜನೆಂದು ಪ್ರಕಟಿಸಿಕೊಂಡನು.





ಮತ್ತೆ ಒಂದು ವರ್ಷದೊಳಗೆ ಅವನ ಸೋದರ ಅಳಿಯನು ಅವನನ್ನು ಕೊಂದು ಸಿಂಹಾಸನವನ್ನೇರಿದನು. ಆಮೇಲೆ ದುಷ್ಟರೆಂದು ಹೆಸರು ಪಡೆದ ಸೈಯದ್ ಸೋದರರು ಅಧಿಕಾರವನ್ನು ಹಸ್ತಗತ ಮಾಡಿಕೊಂಡು, ತಮ್ಮ ಇಷ್ಟಾನುಸಾರವಾಗಿ ಒಬ್ಬರ ತರುವಾಯ ಒಬ್ಬರಂತೆ ಮೂವರು ರಾಜರನ್ನು ಸಿಂಹಾಸನದಲ್ಲಿ ಕೂಡಿಸಿ, ಕೊಲ್ಲಿಸಿಬಿಟ್ಟರು !



ಆಖೈರಿಗೆ ಮಹಮ್ಮದ್ ಷಾ ಸಿಂಹಾಸನವನ್ನು
ಅಧಿಷ್ಠಿಸಿ, ಸೈಯದ್ ಸೋದರರನ್ನು ಹತ
ಮಾಡಿಸಿಬಿಟ್ಟನು. ಆದರೆ, ಆಗಲೇ ಢಿಲ್ಲಿಯಲ್ಲಿ
ಏರ್ಪಟ್ಟ ಅಶಾಂತಿಯನ್ನು ಕುರಿತು, ಅಲ್ಲಿಯ
ಅಸ್ತವ್ಯಸ್ತ ಪರಿಸ್ಥಿತಿಯನ್ನು ಕುರಿತು ಕೇಳಿದ
ಪರ್ಷಿಯಾ ಪಾಲಕನಾದ ನಾದಿರ್ ಷಾ, ದೊಡ್ಡ
ಸೈನ್ಯದೊಂದಿಗೆ ಢಿಲ್ಲಿಯನ್ನು ಆಕ್ರಮಿಸಲಿಕ್ಕಾಗಿ
ಭಾರತ ದೇಶದ ಮೇಲೆ ದಂಡೆತ್ತಿ ಬಂದನು.

ನಾದಿರ್ ಷಾನನ್ನು ಇದಿರಿಸುವ ಸೈನಿಕ ಬಲ
ವಾಗಲಿ, ಧೈರ್ಯ ಸಾಹಸಗಳಾಗಲಿ ಮಹ
ಮ್ಮದ್ ಷಾನಿಗೆ ಇರಲಿಲ್ಲ. ಅದರ ಮೇಲೆ
ರಾಜಪುತ್ರರ ಸಹಾಯವನ್ನು ಕೂಡಾ ಅವನು
ಕೇಳಲಿಲ್ಲ, ಆದುದರಿಂದ ನಾದಿರ್ ಷಾ ಸುನಾ
ಯಾಸವಾಗಿ ಡಿಲ್ಲಿಯನ್ನು ಹಿಡಿದುಕೊಂಡನು.
ಬೇರೆ ಉಪಾಯವಿಲ್ಲದೆ ಮಹಮ್ಮದ್ ಷಾ
ನಾದಿರ್ ಷಾನನ್ನು ಸಗೌರವವಾಗಿ ಸ್ವಾಗತ
ಮಾಡಿಕೊಂಡನು.





ನಾದಿರ್ ಷಾನು ಢಿಲ್ಲಿಯಲ್ಲಿ ಸುಖಭೋಗ
ಗಳನ್ನು ಅನುಭವಿಸಿಕೊಂಡಿರಲು, ಅವನ
ಸೈನಿಕರು ನಗರವನ್ನು ಕೊಳ್ಳೆ ಹೊಡೆಯ
ತೊಡಗಿದರು. ನಾದಿರ್ ಷಾ ಸತ್ತುಹೋದ
ನೆಂಬ ವದಂತಿ ಹೊರಟ ಕೂಡಲೇ ಢಿಲ್ಲೀ
ನಗರದ ಪೌರರು ಹಿಡಿಸಲಾರದಷ್ಟು ಸಂತೋಷ
ದಿಂದ, ಪರ್ಷಿಯಾ ಸೈನಿಕರ ಮೇಲೆ ಇದಿರು
ತಿರುಗಿ ಕೆಲವರನ್ನು ಕೊಂದರು.

ಈ ವಾರ್ತೆ ನಾದಿರ್ ಷಾನ ಕಿವಿಗೆ ಬಿದ್ದ ಕೂಡಲೇ ಅವನು ತನ್ನ ಸೈನಿಕರನ್ನು ಢಿಲ್ಲೀ ಪೌರರ ಮೇಲೆ ಪ್ರತೀಕಾರಕ್ಕೆ ಕೆರಳಿಸಿ ಕಳುಹಿಸಿದನು. ಅವರು ವಿಪರೀತವಾಗಿ ವಿಜೃಂಭಿಸಿ ಮನೆಗಳನ್ನೂ ಅಂಗಡಿಗಳನ್ನೂ ದೋಚಿಕೊಂಡು ನಾಶ ಮಾಡಿದರು. ಮಕ್ಕಳು ಮುದುಕರು, ಗಂಡು, ಹೆಣ್ಣು ಎಂಬ ಭೇದವೇನಿಲ್ಲದೆ ಒಂದೇ ದಿನದಲ್ಲಿ ಮೂವತ್ತು ಸಾವಿರ ಮಂದಿಯನ್ನು ಕೊಂದು ಹಾಕಿದರು.





ಪರ್ಷಿಯಾ ಸೈನಿಕರು ಭವನಗಳಿಗೆಲ್ಲ ಬೆಂಕಿ ಹಚ್ಚಿದರು. ಅಂದಚೆಂದದ ಕಟ್ಟಡಗಳೆಲ್ಲಾ ಅಗ್ನಿಗೆ ಆಹುತಿಯಾಗಿ ಮಸಿಯಾದುವು. ಕಂಡ ಕಂಡ ಪ್ರತಿಯೊಬ್ಬರನ್ನೂ ಕೊಲೆ ಮಾಡಿದರು. ಬ್ರಹ್ಮಾಂಡವಾದ ಢಿಲ್ಲೀ ನಗರವು ದೆವ್ವಗಳ ನಗರವಾಗಿ ಕಂಡಿತು.

ಅಪರಿಮಿತವಾದ ಧನ, ಬಂಗಾರ, ಬೆಲೆ ಬಾಳುವ ಮಣಿರತ್ನಗಳೇ ಅಲ್ಲದೆ, ಜಗತ್ಪ್ರಸಿದ್ಧವಾದ ಮಯೂರ ಸಿಂಹಾಸನವನ್ನು ಕೂಡಾ ನಾದಿರ್ ಷಾನು ತನ್ನೊಂದಿಗೆ ಸಾಗಿಸಿಕೊಂಡು ಹೋದನು. ಅವುಗಳಷ್ಟೇ ಅಲ್ಲದೆ ಸಾವಿರ ಆನೆಗಳನ್ನೂ, ಏಳು ಸಾವಿರ ಕುದುರೆಗಳನ್ನೂ, ಹತ್ತು ಸಾವಿರ ಒಂಟೆಗಳನ್ನೂ, ವಿವಿಧ ವೃತ್ತಿಗಳಲ್ಲಿ ನಿಪುಣರಾದ ಅನೇಕ ಕೆಲಸಗಾರರನ್ನೂ ನಾದಿರ್ ಷಾ ಪರ್ಷಿಯಾಕ್ಕೆ ಸಾಗಿಸಿದನು.





ಸುಪ್ರಸಿದ್ಧವಾದ ಕೋಹಿನೂರ್ ವಜ್ರಕ್ಕಾಗಿ ನಾದಿರ್ ಷಾ ಮೊಗಲ್ ರಾಜಭವನಗಳಲ್ಲೆಲ್ಲಾ ಹುಡುಕಲು ತೊಡಗಿದನು. ಅಮೂಲ್ಯವಾದ ಆ ವಜ್ರವನ್ನು ಮಹಮ್ಮದ್ ಷಾ ತನ್ನ ತಲೆಯ ಉಷ್ಣೀಷದೊಳಗೆ ಅಡಗಿಸಿಕೊಂಡಿರುವಂತೆ ಒಬ್ಬ ಮೊಗಲ್ ಅಧಿಕಾರಿ ರಹಸ್ಯವಾಗಿ ನಾದಿರ್ ಷಾನಿಗೆ ಹೇಳಿದನಂತೆ.

ಗುಟ್ಟು ತಿಳಿದುಕೊಂಡ ನಾದಿರ್ ಷಾ ಮಹಮ್ಮದ್ ಷಾನೊಂದಿಗೆ, "ಮಿತ್ರಾ, ನಮ್ಮ ಮೈತ್ರಿಯ ಚಿಹ್ನೆಯಾಗಿ ನಮ್ಮ ಉಷ್ಣೀಷಗಳನ್ನು ಬದಲಾಯಿಸಿಕೊಳ್ಳೋಣವೇ ?" ಎಂದು ತನ್ನ ತಲೆಯ ಉಷ್ಣೀಷವನ್ನು ತೆಗೆದು ಮಹಮ್ಮದ್ ಷಾನ ಕೈಗೆ ಕೊಟ್ಟು; ಮಹಮ್ಮದ್ ಷಾನ ಉಷ್ಣೀಷವನ್ನು ತಾನೇ ಅವನ ತಲೆಯಿಂದ ತೆಗೆದು ಧರಿಸಿಕೊಂಡನು. ಆ ವಿಧವಾಗಿ ಕೋಹಿನೂರ್ ವಜ್ರವು ಅವನ ಹಸ್ತಗತವಾಯಿತು !





ಢಿಲ್ಲೀ ನಗರವನ್ನು ರಕ್ತದ ಹೊಳೆಯಲ್ಲಿ ಮುಳುಗಿಸಿ ಬೀಭತ್ಸವಾಗಿ ವರ್ತಿಸಿದ ನಾದಿರ್ ಷಾನು ಮೊಗಲ್ ಪರಿಪಾಲನೆಯ ಮೇಲೆ ಮರಣದ ಪೆಟ್ಟನ್ನೇ ಕೊಟ್ಟು ಹೋದನು. ಆ ಕಾಲದಲ್ಲಿಯೇ ಫ್ರೆಂಚು, ಇಂಗ್ಲೀಷು ವರ್ತಕರು ಭಾರತ ದೇಶದಲ್ಲಿಯ ಸಿರಿಸಂಪದಗಳಿಂದ ಆಕರ್ಷಿತರಾಗಿ ಕ್ರಮವಾಗಿ ಬರತೊಡಗಿದರು.

# ಕಿವುಡೇ ಒಳ್ಳೇದು!

**ಒಂ**ದು ಊರಿನಲ್ಲಿ ಹುಟ್ಟು ಕಿವುಡನಾದ ಒಬ್ಬ ಸಾವುಕಾರನಿದ್ದನು. ಅವನು ಕಿವುಡನಾದರೂ ಬರೆಯಲಿಕ್ಕೂ ಓದಲಿಕ್ಕೂ ಕಲಿತಿದ್ದನು. ಅಂತಲೇ ಬಡ್ಡೀ ಲೇವಾದೇವಿ ನಡೆಸಿ ತುಂಬಾ ಆಸ್ತಿ ಪಾಸ್ತಿ ಗಳಿಸಿದ್ದನು.

ಒಂದು ಸಾರಿ ಆ ಊರಿಗೆ ಸನ್ಯಾಸಿಯೊಬ್ಬನು ಬಂದನು. ಅವನು ಚಿಟುಕಿನ ಚಿಕಿತ್ಸೆಗಳಲ್ಲಿ ಬಲು ಗಟ್ಟಿಗ. ಅನೇಕರಿಗೆ ದೀರ್ಘಕಾಲದಿಂದಿದ್ದ ರೋಗಗಳನ್ನು ತನ್ನ ಭಸ್ಮ, ರಸಾಯನಗಳಿಂದ ಗುಣಪಡಿಸಿದ್ದನು. ಸಾವುಕಾರನಿಗೆ ಈ ಸಂಗತಿ ಗೊತ್ತಾಗಿ, ತನ್ನ ಕಿವುಡು ಹೋಗಲು ಅವನಿಂದ ಚಿಕಿತ್ಸೆ ಮಾಡಿಸಿಕೊಳ್ಳಲು ನಿಶ್ಚಯಿಸಿದನು. ಅಲ್ಲಿಗೆ ಹೋಗಿ ತನ್ನ ಪರಿಸ್ಥಿತಿಯನ್ನು ಕಾಗದದಲ್ಲಿ ಬರೆದು ಸನ್ಯಾಸಿಯ ಮುಂದೆ ಇಟ್ಟನು.

"ಕಿವುಡಿನಿಂದ ನಿಮಗೆ ಬಂದ ನಷ್ಟವೇನಿಲ್ಲವಲ್ಲಾ ? ಬಡ್ಡೀ ವ್ಯಾಪಾರದಲ್ಲಿ ಚೆನ್ನಾಗಿಯೇ ಸಂಪಾದಿಸಿದ್ದೀರಿ. ಕಿವುಡಿನ ಸಂಗತಿ ಮರೆತುಬಿಡಿ" ಎಂದನು ಸನ್ಯಾಸಿ.

ಸಾಹುಕಾರನು ಅದಕ್ಕೆ ಒಪ್ಪಲಿಲ್ಲ. ತನ್ನ ಹತ್ತಿರ ಹಣಕ್ಕಾಗಿ ಬರುವ ಕೆಲವರು ಕೋಪದಿಂದ ಏನೋ ಮಾತಾಡುತ್ತಾರೆಂದೂ, ಮತ್ತೆ ಕೆಲವರು ತನ್ನನ್ನು ಗುರುಗುಟ್ಟಿ ನೋಡುತ್ತಾರೆಂದೂ ಹೇಳಿ, "ಅಯ್ಯಾ, ಅವರು ಹೇಳುವುದೇನೆಂದು ಕೇಳಬೇಕೆಂದು ನನಗೆ ತುಂಬಾ ಆಸೆಯಾಗಿದೆ" ಎಂದನು.

ಚಿಟುಕಿನ ಸನ್ಯಾಸಿ ಸಾವುಕಾರನಿಗೆ ಒಂದು ದ್ರಾವಕವನ್ನು ಕೊಟ್ಟು, "ಇದು ವನಮೂಲಿಕೆಗಳಿಂದಾದ ಕರ್ಣಾಮೃತ. ಇದನ್ನು ಉಪಯೋಗಿಸಿದರೆ ಒಂದು ತಿಂಗಳವರೆಗೆ ನಿಮಗೆ ಕೇಳುವ ಶಕ್ತಿ ಬರುತ್ತದೆ. ಅಷ್ಟರೊಳಗೆ ಇದಕ್ಕೆ ಪರಿಹಾರದ ಮದ್ದು ಬೇಕೆಂದರೆ ಸಿಗಲಾರದು" ಎಂದನು.

ಸಾವುಕಾರನು ಆ ದಿನ ಸಾಯಂಕಾಲವೇ ಸನ್ಯಾಸಿಯ ಬಳಿಗೆ ಹಿಂದಿರುಗಿ ಬಂದು, "ನಿಮ್ಮ ಕರ್ಣಾಮೃತವು ಅತ್ಯಮೋಘವೇ ಸರಿ. ಆದರೆ ನನ್ನ ಹತ್ತಿರ ಹಣಕ್ಕಾಗಿ ಬರುವವರು ನಾನಿನ್ನೂ ಕಿವುಡನೇ ಎಂದು ನಂಬಿದ್ದಾರೆ. ಅವರು ಹೇಳುವ ಹೀನ ಮಾತು ಕೇಳಲಿಕ್ಕೇ ಸಾಧ್ಯವಿಲ್ಲ. ಅದಕ್ಕಿಂತ ಕಿವುಡುತನವೇ ಒಳ್ಳೇದು. ಮದ್ದಿನ ಪ್ರಭಾವ ತಿಂಗಳವರೆಗಿರುವುದಷ್ಟೆ? ಅದುವರೆಗೆ ನನ್ನನ್ನು ನಿಮ್ಮ ಬಳಿಯಲ್ಲೇ ಇಟ್ಟುಕೊಂಡಿರಿ" ಎಂದನು ದೀನತೆಯಿಂದ.





# ಸೂಕ್ಷ್ಮಗ್ರಾಹಿ

**ಹಿಂ**ದೆ ಪುರಂದರ ನಗರದಲ್ಲಿ ಚಂದ್ರನಾಗನೆಂಬ ವರ್ತಕನು ಪೂರ್ವ ಸಮುದ್ರದೊಳಗಿನ ದ್ವೀಪಗಳಲ್ಲಿ ವಾಣಿಜ್ಯ ನಡೆಸುವ ದೊಡ್ಡ ವ್ಯಾಪಾರಿಯಾಗಿದ್ದನು. ಅವನಿಗೆ ಸರಕುಗಳನ್ನು ಆಯಾತ ನಿರ್ಯಾತ ಮಾಡುವ ಕಾರ್ಯಗಳಲ್ಲಿ ಸಹಾಯಕನಾಗಿರಲು ಸಮರ್ಥನಾದ ಒಬ್ಬನು ಅಗತ್ಯವಾಗಿ ಬೇಕಾಯಿತು. ಈ ಸಂಗತಿಯನ್ನು ಅವನು ತನ್ನ ಜತೆಯವರಾದ ಸ್ನೇಹಿತ ವರ್ತಕರೊಂದಿಗೆ ಪ್ರಸ್ತಾಪಿಸಿದ್ದನು. ಅವರೊಳಗೆ ಒಬ್ಬ ಸ್ನೇಹಿತನು, ಚಂದ್ರನಾಗನ ಬಳಿಗೆ ಇಬ್ಬರು ಯುವಕರನ್ನು ಕಳುಹಿಸಿ, ಇವರಲ್ಲಿ ನಿಮಗೆ ಹಿಡಿಸಿದ ಒಬ್ಬನನ್ನು ಕೆಲಸಕ್ಕೆ ಸೇರಿಸಿಕೊಳ್ಳಬಹುದೆಂದೂ, ಇಬ್ಬರೂ ವಿಶ್ವಾಸಪಾತ್ರರಾಗಿ ನಡೆದುಕೊಳ್ಳುವವರೇ ಎಂದೂ ತಿಳಿಸಿದ್ದನು. ಅವರಲ್ಲಿ ಒಬ್ಬನ ಹೆಸರು ವಿಶಾಖ, ಇನ್ನೊಬ್ಬನು ಆನಂದ.

ಚಂದ್ರನಾಗನು ಆ ಇಬ್ಬರಲ್ಲಿ ಮೊದಲು ಆನಂದನನ್ನು, ಹಡಗಿನ ರೇವಿನ ಹತ್ತಿರವಿರುವ ತನ್ನ ಬಂಡಸಾಲೆಗೆ ಕರೆದುಕೊಂಡು ಹೋದನು. ಅಲ್ಲಿ ಅನೇಕ ಮರದ ಪೆಟ್ಟಿಗೆಗಳು ಚೆಲ್ಲಾಚೆದರಾಗಿ ಬಿದ್ದಿದ್ದವು. ಚಂದ್ರನಾಗನು ಆನಂದನಿಗೆ ಆ ಪೆಟ್ಟಿಗೆಗಳನ್ನು ತೋರಿಸಿ, "ನೋಡಪ್ಪ, ಆ ಪೆಟ್ಟಿಗೆಗಳಲ್ಲಿ ಬೆಳ್ಳಿ ಕಂಚು ಮತ್ತು ಇತರ ಲೋಹಗಳಿಂದ ತುಂಬಿದ ಬೇರೆ ಬೇರೆ ವಸ್ತುಗಳಿವೆ. ಇವುಗಳನ್ನು ನಾನು ಚಂದ್ರಪುರ ವರ್ತಕನಿಂದ ಕೊಂಡುಕೊಂಡಿದ್ದೇನೆ. ಇವನ್ನೆಲ್ಲ ಬೇಗದಲ್ಲೇ ಹಡಗಿನಲ್ಲೇರಿಸಿ ಪೂರ್ವದ್ವೀಪ ರಾಜ್ಯಗಳಿಗೆ ಕಳುಹಿಸಬೇಕಾಗಿದೆ. ಪ್ರಸ್ತುತಕ್ಕೆ ಇವುಗಳನ್ನೆಲ್ಲ ನಮ್ಮ ಬಂಡಸಾಲೆಯೊಳಗೆ ಓರಣವಾಗಿ ಇಡಿಸಬೇಕು" ಎಂದನು.

ಆಮೇಲೆ ಚಂದ್ರನಾಗನು ಸ್ವಲ್ಪ ದೂರದಲ್ಲಿರುವ ನಾಲ್ವರು ಮನುಷ್ಯರನ್ನು ಕರೆದು, ಆನಂದನೊಂದಿಗೆ, "ಇವರು ಚಂದ್ರಪುರ ವರ್ತಕನ ಮನುಷ್ಯರು. ಇವರೇ ಈ ಪೆಟ್ಟಿಗೆಗಳನ್ನು ಇಲ್ಲಿಗೆ ತಂದವರು. ಇವರು ಅಕೋ, ಅಲ್ಲಿ ಕಾಣುವ ಕೋಣೆಯೊಳಗೆ ಈ ಪೆಟ್ಟಿಗೆಗಳನ್ನು ಒಯ್ಯುತ್ತಾರೆ. ಅಲ್ಲಿಂದ ಹಡಗಿಗೆ ಏರಿಸುವುದು ಸುಲಭ. ಅಲ್ಲಿ ನಮ್ಮ ಮನುಷ್ಯನೊಬ್ಬನಿದ್ದಾನೆ. ಅವನೇ ಇವುಗಳನ್ನು ಕ್ರಮಪದ್ಧತಿಯಲ್ಲಿ ಒಂದರ ಹಿಂದೊಂದಾಗಿ ಇಡುತ್ತಾನೆ. ನೀನು ಮಾತ್ರ ಅಲ್ಲಿ ಹತ್ತಿರವೇ ನಿಂತಿದ್ದು, ಒಟ್ಟು ಎಷ್ಟು ಪೆಟ್ಟಿಗೆಗಳಿವೆ ಎಂಬುದನ್ನು ಲೆಕ್ಕ ಬರೆದು

ರಾಂಬಾಬು

ನನಗೆ ಆ ಲೆಕ್ಕದ ಚೀಟನ್ನು ತಂದುಕೊಡು" ಎಂದು ಹೇಳಿ ಅಲ್ಲಿಂದ ಹೊರಟು ಹೋದನು.

ಆನಂದನು ಚಂದ್ರನಾಗನು ಹೇಳಿದ ಹಾಗೆಯೇ ನೋಡುತ್ತಾ ನಿಂತನು. ಆ ನಾಲ್ವರು ಮನುಷ್ಯರು ಆಯಾಸಪಡುತ್ತ ಎತ್ತಿ ತಂದ ಪೆಟ್ಟಿಗೆಗಳನ್ನು, ಅಲ್ಲಿದ್ದ ಚಂದ್ರನಾಗನ ಮನುಷ್ಯನು ನಿರಾಯಾಸವಾಗಿ ಎತ್ತಿ ಒಂದರ ಮೇಲೊಂದಾಗಿಯೂ, ಕೆಲವನ್ನು ಒಂದರ ಹಿಂದೊಂದಾಗಿಯೂ ಓರಣೆಸಿಟ್ಟನು.

ಆನಂದನು ಆ ಪೆಟ್ಟಿಗೆಗಳನ್ನು ಲೆಕ್ಕ ಮಾಡುತ್ತಾ ನೋಡುತ್ತಿದ್ದನು.

ಆ ಕೆಲಸ ಮುಗಿದ ಮೇಲೆ ಆನಂದನು ಚಂದ್ರನಾಗನ ಬಳಿಗೆ ಹೋಗಿ, ಎಲ್ಲಾ ಪೆಟ್ಟಿಗೆಗಳೂ ಓರಣಗೊಳಿಸಿ ಇಡಲಾಯಿತೆಂದೂ, ಅವು ಒಟ್ಟು ನೂರ ಹತ್ತು ಪೆಟ್ಟಿಗೆಗಳಿವೆಯೆಂದೂ ಹೇಳಿ, ಲೆಕ್ಕ ಬರೆದ ಕಾಗದವನ್ನೂ ಕೊಟ್ಟನು. ಚಂದ್ರನಾಗನು ಅದನ್ನು ಒಂದು ಸಾರಿ ನೋಡಿ, ಸರಿಯೆಂದು, ಅವನನ್ನು ಕೆಲಸಕ್ಕೆ ಇಟ್ಟುಕೊಳ್ಳುವ ಹಾಗಿದ್ದರೆ ಎರಡು ದಿನಗಳಲ್ಲಿ ಆಳಿನ ಮೂಲಕ ಹೇಳಿ ಕಳುಹಿಸುವೆನೆಂದು ಹೇಳಿ ಆನಂದನನ್ನು ಕಳುಹಿಸಿದನು.

ಮರುದಿನ ಚಂದ್ರನಾಗನು, ವಿಶಾಖನನ್ನು ರೇವಿನ ಹತ್ತಿರವಿದ್ದ ಇನ್ನೊಂದು ಬಂಡಸಾಲೆಗೆ ಕರೆದೊಯ್ದು, ಅಲ್ಲಿ ಚೆಲ್ಲಾಚೆದರಾಗಿ ಬಿದ್ದಿದ್ದ ಪೆಟ್ಟಿಗೆಗಳನ್ನು ತೋರಿಸಿ, ಆನಂದನಿಗೆ ಹೇಳಿದ ಹಾಗೆಯೇ ಹೇಳಿ ಹೊರಟು ಹೋದನು. ಅಲ್ಲಿಯೂ ಆ ಪೆಟ್ಟಿಗೆಗಳನ್ನು ತಂದ ಬೇರೆ ದ್ವೀಪದ ನಾಲ್ವರು ಮನುಷ್ಯರೂ, ಇನ್ನೊಂದು ಕೋಣೆಯಲ್ಲಿ ಚಂದ್ರನಾಗನ ಮನುಷ್ಯನೂ ಇದ್ದರು.

ಬಂಡಸಾಲೆಯ ಕೋಣೆಯ ಹತ್ತಿರ ಪೆಟ್ಟಿಗೆಗಳನ್ನು ಲೆಕ್ಕ ಮಾಡಿಕೊಂಡಿದ್ದ ವಿಶಾಖನಿಗೆ ಒಂದು ಸಂದೇಹ ಉಂಟಾಯಿತು. ನಾಲ್ವರು ಮನುಷ್ಯರು ಬಹಳ ಆಯಾಸಪಡುತ್ತ, ಹೊತ್ತು ತರುವ ಪೆಟ್ಟಿಗೆಗಳನ್ನು ಕೋಣೆಯಲ್ಲಿರುವ ಚಂದ್ರನಾಗನ ಮನುಷ್ಯನು ನಿರಾಯಾಸದಿಂದ ಎತ್ತಿ ಒಂದರ ಮೇಲೊಂದಾಗಿ ಇಡುತ್ತಿದ್ದಾನೆ! ಅವನು ಬಲಾಢ್ಯನಾದ ಭೀಮ ಕಾಯನಾಗಿಯೂ ಇರಲಿಲ್ಲ.



ಕೆಲಸ ಪೂರ್ತಿಯಾದ ಮೇಲೆ ವಿಶಾಖನು ಚಂದ್ರನಾಗನ ಬಳಿಗೆ ಹೋಗಿ ಪೆಟ್ಟಿಗೆಯ ಮೊತ್ತ ಒಟ್ಟು ನೂರಹತ್ತು ಎಂದು ಲೆಕ್ಕ ಕೊಟ್ಟು, "ಅಯ್ಯಾ, ನೀವು ಹೇಳಿದ ಆ ಚಂದ್ರಪುರದ ವರ್ತಕನಲ್ಲಿ ತಮಗೆ ಈ ಮೊದಲೇ ಲೇವಾದೇವಿ ಇರಬಹುದೆಂದು ಕಾಣುತ್ತದೆ. ಅಂದರೆ ನಿಮ್ಮನ್ನು ತುಂಬಾ ನಂಬಿಸಿರಬಹುದು. ಅದು ನನಗೆ ಗೊತ್ತಿಲ್ಲ ನಿಜ. ಈಗ ನನಗೆ ಅವರ ಪ್ರಾಮಾಣಿಕತೆಯನ್ನು ಕುರಿತು ಸ್ವಲ್ಪ ಅನುಮಾನವಾಗುತ್ತದೆ. ಆ ವಿಷಯ ತಮಗೆ ಹೇಳುವುದು ನನ್ನ ಬಾಧ್ಯತೆ" ಎಂದನು.

"ಏಕೆ ಅನುಮಾನ?" ಎಂದು ಚಂದ್ರನಾಗನು ಕೇಳಿದನು.

"ಆ ಪೆಟ್ಟಿಗೆಗಳ ತುಂಬಾ ಬೆಳ್ಳಿ, ಕಂಚು ಮೊದಲಾದ ಲೋಹಗಳ ವಸ್ತುಗಳಿವೆಯೆಂದು ಹೇಳಿದಿರಿ. ಆದರೆ ಇದರಲ್ಲಿ ಆ ವರ್ತಕನು ಬುದ್ಧಿವಂತಿಕೆಯಿಂದ ಮೋಸ ಮಾಡಿರಬೇಕು. ಅವುಗಳನ್ನು ಕೋಣೆಯ ಕಡೆಗೆ ಹೊತ್ತು ತಂದ ನಾಲ್ವರೂ ಅವರ ಮನುಷ್ಯರು ತಾನೇ? ಅವರು ಅವುಗಳನ್ನು ಹೊರಲು ಬಹಳ ಶ್ರಮ ಪಡುವಂತೆ ನಟಿಸಿದ್ದಾರೆ. ಹಾಗಿಲ್ಲದಿದ್ದರೆ ನಮ್ಮ ಮನುಷ್ಯನು ಬಹಳ ಹಗುರಾಗಿ ಎತ್ತಿ ಎತ್ತಿ ಅವುಗಳನ್ನು ಓರಣವಾಗಿರಿಸಲು ಸಾಧ್ಯವಾದೀತೆ? ಆ ಪೆಟ್ಟಿಗೆಗಳಲ್ಲಿರುವುದು ಲೋಹದ ವಸ್ತುಗಳಲ್ಲ, ಬೇರೆ ಯಾವುದೋ ಹುಲ್ಲಿನಂತಹ ಹಗುರ ವಸ್ತುಗಳೇ ಎಂದು ನನ್ನ ಅಭಿಪ್ರಾಯ. ಹೀಗೆ ಮೋಸ ಪಡಿಸಿ, ಆಮೇಲೆ ನೀವು ಕೇಳಿದರೆ, ನಮ್ಮ ಮನುಷ್ಯರೇ ಮೋಸ ಮಾಡಿದ್ದರೆಂದು ಹೇಳಿ ಅವನು ತಪ್ಪಿಸಿಕೊಳ್ಳಲು ಎಡೆಯುಂಟಷ್ಟೆ? ಆ ಮನುಷ್ಯರು ಹೊರಟು ಹೋಗುವ ಮೊದಲೇ ತಾವು ಬಂಡಸಾಲೆಗೆ ಬಂದು ಅವುಗಳನ್ನು ತೆರೆಯಿಸಿ ನೋಡುವುದು ಒಳ್ಳೆಯದು" ಎಂದನು ವಿಶಾಖ.

ಆ ಮಾತು ಕೇಳಿ ಚಂದ್ರನಾಗನು ತೃಪ್ತಿಯಿಂದ ನೋಡಿ, ವಿಶಾಖನ ಹೆಗಲು ತಟ್ಟಿ, "ನೀನು ಸೂಕ್ಷ್ಮಗ್ರಾಹಿಯಪ್ಪ!" ಎಂದು ಮೆಚ್ಚಿಕೊಂಡು, "ಆ ಪೆಟ್ಟಿಗೆಗಳೂ, ಅವುಗಳನ್ನು ಹೊತ್ತ ನಾಲ್ವರು ಮನುಷ್ಯರೂ ನಮ್ಮವರೇ, ಉದ್ಯೋಗಕ್ಕಾಗಿ ಬಂದ ನಿಮ್ಮಿಬ್ಬರ ಬುದ್ಧಿಯನ್ನೂ, ಚುರುಕುತನವನ್ನೂ ಪರೀಕ್ಷಿಸಲು ಹೀಗೆ ಮಾಡಿಸಿದೆ. ಈ ಪರೀಕ್ಷೆಯಲ್ಲಿ ಗೆದ್ದವನು ನೀನು. ಈ ದಿನದಿಂದಲೇ ನೀನು ನನ್ನ ಹತ್ತಿರ ಕೆಲಸದಲ್ಲಿ ಸೇರಿದಂತೆ, ನನ್ನ ಮಿತ್ರನಿಗೆ ತಿಳಿಸುತ್ತೇನೆ" ಎಂದನು.

ಇದು ಪರೀಕ್ಷೆ ಎಂದು ತಿಳಿಯದೆಯೇ ಅದರಲ್ಲಿ ತಾನು ವಿಜಯ ಸಾಧಿಸಿಕೊಂಡುದನ್ನು ತಿಳಿದು, ವಿಶಾಖನಿಗೆ ಆಶ್ಚರ್ಯದೊಂದಿಗೆ ಬಹಳ ಸಂತೋಷವೂ ಆಯಿತು.





# ಹೆಂಡತಿಯ ಬಯಕೆ

ರಮಾಪತಿ ಎಂಬವನು ಒಂದು ಕಚೇರಿಯಲ್ಲಿ ಸಾಧಾರಣ ಗುಮಾಸ್ತನಾಗಿ ಕೆಲಸಮಾಡುತ್ತಿದ್ದನು. ಸಾಯಂಕಾಲದಲ್ಲಿ ಅವನು ಕಚೇರಿಯಿಂದ ಸಹೋದ್ಯೋಗಿಗಳೊಂದಿಗೆ ಮನೆಗೆ ಹೊರಟನು. ಅವನು ಮನೆಯನ್ನು ಸಮೀಪಿಸುವಾಗ ಹೆಂಡತಿ ತಲೆಬಾಗಿಲಲ್ಲಿ ನಿಂತು ನಿರೀಕ್ಷಿಸುವುದನ್ನು ನೋಡಿ ಅವನ ಮನಸ್ಸು ಚಿವುಕ್ಕೆಂದಿತು. ಅವನನ್ನು ಕಂಡ ಕೂಡಲೇ ಅವಳ ಮುಖ ಸುರುಟಿಕೊಂಡಿತು.

ಬರಿಗೈಯಿಂದ ಎಂದಿನಂತೆ ಬರುವ ಗಂಡನನ್ನು ನೋಡಿ ಹೆಂಡತಿ "ಈ ದಿನ ಕೂಡಾ ಒಳ್ಳೆಯ ಹಲಸಿನ ಹಣ್ಣು ಸಿಗಲೇ ಇಲ್ಲವೆ?" ಎಂದು ಕೇಳಿದಳು.

"ಸಿಕ್ಕಿದರೆ ತಾರದೆ ಬಿಡುತ್ತಿದ್ದನೇನೇ? ಅಂಗಡಿಯವನು ನಾಳೆ ಒಳ್ಳೆಯ ಹಲಸಿನ ಹಣ್ಣು ಬರುತ್ತದೆಂದು ಹೇಳಿದ್ದಾನೆ. ನಾಳೆ ಖಂಡಿತಾ ತರುತ್ತೇನೆ ಬಿಡು" ಎಂದು ಹೇಳಿ ರಮಾಪತಿ ತನ್ನ ಪಾಡಿಗೆ ಒಳಗೆ ಹೋದನು.

ರಮಾಪತಿಯ ಸಂಪಾದನೆ ಎಷ್ಟೆಂದರಷ್ಟೇ ಇದ್ದಿತು. ಬಹಳ ಜಾಗರೂಕತೆಯಿಂದಿದ್ದರೆ ಮನೆ ಖರ್ಚುಗಳಿಗೆ ಹೇಗೋ ಸರಿತೂಗಿಸಿಕೊಳ್ಳಬಹುದು. ತಿಂಗಳು ತುಂಬಿಕೊಂಡಿರುವ ಹೆಂಡತಿ ಈವರೆಗೂ ಅವನ ಹತ್ತಿರ ಅದು ತಿನ್ನಬೇಕು, ಇದು ತಿನ್ನಬೇಕು ಎಂದು ಕೇಳಿದವಳಲ್ಲ. ತುಂಬಾ ಮಿತವ್ಯಯದ ಗುಣದವಳು, ಈ ನಡುವೆ ಅವಳಿಗೆ ಹಲಸಿನ ಹಣ್ಣು ತಿನ್ನಬೇಕೆಂಬ ಬಯಕೆಯಾಗಿತ್ತು. ಅದನ್ನು ಮುಚ್ಚಿಟ್ಟರೆ ಮಗುವಿಗೆ ಏನೋ ಊನ ಬರುವುದೆನ್ನುತ್ತಾರಷ್ಟೆ? ಅಂತಲೇ ಅವಳು ದಾಕ್ಷಿಣ್ಯ ಪಡುತ್ತ ಆ ಸಂಗತಿಯನ್ನು ಗಂಡನೊಂದಿಗೆ ಹೇಳಿಬಿಟ್ಟಿದ್ದಳು.

ಹಲಸಿನ ಹಣ್ಣು ಕೊಂಡುಕೊಳ್ಳಬೇಕಾದರೆ ಕಡೇ ಪಕ್ಷ ಆರು ರೂಪಾಯಿಯಾದರೂ ಬೇಕು. ತಿಂಗಳ ಕೊನೆಯ ವಾರವಾದುದರಿಂದ ರಮಾಪತಿಯ ಹತ್ತಿರ ಅಷ್ಟು ಹಣವಿರಲಿಲ್ಲ. ಸಾಲ ಕೇಳೋಣವೆಂದರೆ ಸಹೋದ್ಯೋಗಿಗಳ ಪರಿಸ್ಥಿತಿಯೂ ಅವನ ಹಾಗಿನದೇ ಎಂದು ಗೊತ್ತಿತ್ತು. ಆ ಕಾರಣದಿಂದ ಅವನು ಹಲಸಿನ ಹಣ್ಣು ತಾರದುದಕ್ಕೆ ಏನೇನೋ ಕಾರಣ ಹೇಳುತ್ತಾ ಬರುತ್ತಿದ್ದನು.

ಆ ದಿನ ರಾತ್ರಿ ರಮಾಪತಿಗೆ ಸರಿಯಾಗಿ ನಿದ್ದೆ ಬರಲಿಲ್ಲ. ತಾನು ಸಾಯಂಕಾಲ ಕಚೇರಿಯಿಂದ

ಎಂ. ಕೆ. ಈಶ್ವರರಾವ್



ಹೊರಟು ಮನೆಗೆ ಬರುವಾಗ ಒಂದು ಮನೆಯ ಆವರಣದಲ್ಲಿದ್ದ ಹಲಸಿನ ಮರದಲ್ಲಿ ಅನೇಕ ಹಲಸಿನ ಕಾಯಿಗಳು ನೇತಾಡುವುದನ್ನು ಕಂಡಿದ್ದುದು ನೆನಪಾಯಿತು. ಕತ್ತಲೆಯಲ್ಲಿ ಹೋಗಿ, ಒಂದು ಬೆಳೆದ ಕಾಯಿಯನ್ನು ಕೊಯ್ದುಕೊಂಡು ಬಂದರೆ ಹೆಂಡತಿಯ ಬಯಕೆ ತೀರಿಬಿಡುತ್ತದೆ. ಕಳ್ಳತನವಾದ ಸಂಗತಿ ಆ ಮನೆಯವರ ಗಮನಕ್ಕೂ ಬಾರದು.

ರಮಾಪತಿ ಸ್ವಲ್ಪ ಹೊತ್ತು ಆಲೋಚಿಸಿ, ಹೆಂಡತಿ ಗಾಢ ನಿದ್ರೆಯಲ್ಲಿರುವುದನ್ನು ಗಮನಿಸಿ, ಒಂದು ಗೋಣೀಚೀಲ ತೆಗೆದುಕೊಂಡು, ಸದ್ದಿಲ್ಲದಂತೆ ಹಿಂದಿನ ಬಾಗಿಲನ್ನು ತೆರೆದು ಹೊರಗೆ ಹೋದನು.

ಅವನು ಹಲಸಿನ ಮರವಿರುವ ಮನೆಯನ್ನು ತಲಪುವಾಗ ಅರ್ಧರಾತ್ರಿಯಾಗಿತ್ತು. ರಮಾಪತಿ ಶಬ್ದ ಮಾಡದೆ ಆವರಣದ ಗೋಡೆಯ ಮೇಲೇರಿ ಆಚೆಗೆ ಹಾರಿ, ಹಲಸಿನ ಮರದ ಹತ್ತಿರ ಹೋದನು. ತರುವಾಯ ಕೈಗೆಟಕುವಷ್ಟು ಕೆಳಗೇ ಇದ್ದ ಕಾಯಿಗಳ ಮೇಲೆ ಬೆರಳಿನಿಂದ ಚಿಟಿಕೆ ಬಾರಿಸಿ, ಪಕ್ವಕ್ಕೆ ಬಂದ ಕಾಯಿಯನ್ನು ಶಬ್ದದಿಂದ ತಿಳಿದು, ಅದನ್ನು ಕೊಯಿದು ಗೋಣೀ ಚೀಲದೊಳಗೆ ಹಾಕಿಕೊಂಡನು. ಇನ್ನು ಆವರಣ ದಾಟಿಬಿಟ್ಟರೆ ಕೆಲಸ ಮುಗಿಯಿತು.

ಆಮೇಲೆ ರಮಾಪತಿಗೆ ಭಾರವಾದ ಆ ಗೋಣೀ ಚೀಲದೊಂದಿಗೆ ಗೋಡೆ ಹಾರಿ ಆಚೆಗೆ ಹೋಗುವುದು ಸಾಧ್ಯವಾಗಲಿಲ್ಲ. ಆವರಣದ ಇದಿರು ಬಾಗಿಲು ತೆರೆದೇ ಹೊರಗೆ ಹೋಗಬಹುದೆಂದುಕೊಳ್ಳುತ್ತ, ಗೋಡೆಯ ಬದಿಯಲ್ಲೇ ಸದ್ದಾಗದಂತೆ ಜಾಗರೂಕತೆಯಿಂದ ಆಚೆಗೆ ನಡೆದನು.

ಆಗ ಅಲ್ಲಿಯ ಒಂದು ದೃಶ್ಯವು ಅವನನ್ನು ಬೆರಗಾಗಿಸಿತು. ಅಲ್ಲಿ ಒಬ್ಬ ಮನುಷ್ಯನು ಗುಂಪಾಗಿ ಬೆಳೆದ ಗಿಡಗಳ ನಡುವೆ ಕುಳಿತು, ಕತ್ತಲೆಯಲ್ಲಿ ನೆಲವನ್ನು ಅಗೆಯುತ್ತಿದ್ದನು. ಅವನ ಪಕ್ಕದಲ್ಲಿದ್ದ ಗೋಣಿಚೀಲದಲ್ಲಿ ಯಾವುದೋ ವಸ್ತುವಿದ್ದಿತು.

ತಾನು ಕಳ್ಳನಾಗಿ ಅಲ್ಲಿಗೆ ಪ್ರವೇಶಿಸಿದೆನೆಂಬ ಪರಿವೆಯಿಲ್ಲದೆ ರಮಾಪತಿ, "ಯಾರದು? ಏನು ಮಾಡುವುದು ಇಲ್ಲಿ?" ಎಂದು ಅವನಿಗರಿಯದಂತೆಯೇ ಮೊರಟಾಗಿ ಕೇಳಿದನು.

ಗುಂಡಿ ತೋಡುವವನು ಆ ಪ್ರಶ್ನೆಯನ್ನು ಕೇಳಿದ ಕೂಡಲೇ ಆದುರಿಬಿದ್ದು, ಕೈಯಲ್ಲಿದ್ದ ಗುದ್ದಲಿಯನ್ನು ಜಾರಬಿಟ್ಟು, "ಶ್ಶೂ! ಶ್ಶೂ! ಸ್ವಲ್ಪ ಮೆಲ್ಲನೆ ಮಾತಾಡು! ನನ್ನವಳು ಒಳಗಿನಿಂದ ಎದ್ದು ಗಿದ್ದು ಬಂದಾಳು!" ಎಂದು ಪಿಸುದನಿಯಿಂದ ಹೇಳುತ್ತ, ಮುಚ್ಚಿದ್ದ ಮನೆಯ ಹಿಂಬಾಗಿಲನ್ನು ಭಯದಿಂದ ನೋಡಿದನು.

ಅವನು ಆ ಮನೆಯ ಯಜಮಾನನೆಂದು ತಿಳಿದುಕೊಂಡ ರಮಾಪತಿ, ತಪ್ಪು ಕೆಲಸಕ್ಕೆ ಬಂದ ತನ್ನನ್ನು ಅರಿತು ಹೆದರುತ್ತ, ಗೋಣೀಚೀಲವನ್ನು ಕೆಳಗಿಟ್ಟು, "ಕ್ಷಮಿಸಿಬಿಡಿರಯ್ಯ! ನನ್ನ ಹೆಂಡತಿಗೋಸ್ಕರವಾಗಿ ನಿಮ್ಮ ಮರದಿಂದ ಉಪಾಯವಿಲ್ಲದೆ ಕಳ್ಳನ ಹಾಗೆ

ಒಂದು ಹಲಸಿನ ಕಾಯಿ ಕೊಯಿದುಕೊಂಡುಬಿಟ್ಟೆನು. ತಪ್ಪಾಯಿತು " ಎಂದನು.

ಮನೆಯ ಯಜಮಾನನು ರಮಾಪತಿಯ ಮುಖ ವನ್ನು ಬಾಗಿ ನೋಡಿ, " ಹಲಸಿನ ಕಾಯಿಯೋ ? ಒಂದೇನು, ಹತ್ತು ಕೊಯಿದುಕೊಂಡು ಹೋಗಪ್ಪ. ಮೊದಲು ಈ ಗುಂಡಿ ತೋಡಲು ನನಗೆ ಸ್ವಲ್ಪ ಸಹಾಯ ಮಾಡುವಿಯಾ ? ಈ ಗೋಣಿಯಲ್ಲಿರುವ ಸತ್ತ ಬೆಕ್ಕನ್ನು ಬಹಳ ಗುಟ್ಟಾಗಿ ಹುಗಿಯ ಬೇಕಾಗಿದೆ " ಎಂದನು.

ರಮಾಪತಿ ಬದುಕಿದೆನೆಂದುಕೊಂಡು, ಗುದ್ದಲಿ ಹಿಡಿದು ಗುಂಡಿ ತೋಡ ತೊಡಗಿದನು. ಮನೆಯ ಯಜಮಾನನು ಸಣ್ಣ ಸ್ವರದಲ್ಲಿ ಗೋಣಿಯಲ್ಲಿರುವ ಬೆಕ್ಕಿನ ಶವದ ಕಥೆಯನ್ನು ಅವನಿಗೆ ಹೇಳಿದನು. ಅದೇನೆಂದರೆ,

ಆ ಬೆಕ್ಕು ಅಂದರೆ ಅವನ ಹೆಂಡತಿಗೆ ಪಂಚಪ್ರಾಣ. ಯಾವಾಗಲೂ ಅದು ಅವಳ ಜತೆಯಲ್ಲೇ ಇರುತಿತ್ತು. ನಾಲ್ಕು ದಿನಗಳ ಹಿಂದೆ ಅವಳ ಬಂಧುಗಳೊಬ್ಬರ ಮನೆಯ ಮದುವೆಗೆಂದು ಅವಳು ಹೋಗುವಾಗ, ಆ ಬೆಕ್ಕನ್ನೂ ತನ್ನ ಜತೆಯಲ್ಲಿ ಕರೆದೊಯ್ಯಲು ನೋಡಿದಳು. ಆ ಬೆಕ್ಕಿಗೂ ಅವಳಿಗೂ ಇರುವ ಸ್ನೇಹ ವನ್ನು ಕುರಿತು ಅಕ್ಕಪಕ್ಕದವರೆಲ್ಲಾ ಕಥೆ ಕಟ್ಟಿ ಹೇಳು ತ್ತಾರೆ. ಇನ್ನು ಆ ಊರಿಗೂ ಈ ಬೆಕ್ಕಿನೊಂದಿಗೆ ಹೋಗಿ ಅಲ್ಲಿನವರು ಕೂಡಾ ಗೇಲಿಮಾಡಿ ನಗುವ ಹಾಗಾಗಬಾರದೆಂದು ರಮಾಪತಿ ಅವಳಿಗೆ ಹೇಳಿದನು. ಸ್ವಲ್ಪದರಲ್ಲಿ ಅವಳು ಒಪ್ಪಲಿಲ್ಲ.

ಕಡೆಗೆ ಅವಳು ಸ್ವಲ್ಪ ಆಲೋಚಿಸಿ, " ಒಂದು ನೋಡಿದರೆ ನೀವು ಹೇಳುವುದು ನಿಜವೇ. ಆ ಹೊಸ ಜಾಗದಲ್ಲಿ ನನ್ನ ಮುದ್ದಿನ ಈ ಬೆಕ್ಕಿಗೆ ದೃಷ್ಟಿ ತಗಲಿ ದರೂ ತಗಲೀತು. ಇಲ್ಲೇ ಬಿಟ್ಟು ಹೋಗುತ್ತೇನೆ. ಜಾಗ್ರತೆಯಿಂದ ನೋಡಿಕೊಳ್ಳಿ. ಹಾಲು ಹಾಕಲು ಮರೀಬೇಡಿ. ಅನ್ನಕ್ಕೆ ಸ್ವಲ್ಪ ತುಪ್ಪ ಹಾಕದಿದ್ದರೆ ಅದು ಮುಟ್ಟುವುದಿಲ್ಲ. ನಾನು ಹಿಂದಿರುಗಿ ಬಂದ ಮೇಲೆ ಅದೇನಾದರೂ ಸೊರಗಿ ಹೋಗಿದ್ದರೆ ನಾನು ಸುಮ್ಮನಿರಲಾರೆ ! ನಿಮ್ಮನ್ನು ಎಂಟು ದಿನ ಉಪವಾಸ





ಹಾಕೇನು ! ಮತ್ತೆ ನನ್ನನ್ನು ದೂರಬೇಡಿ. ಒಂದು ಮುಖ್ಯ ವಿಷಯ. ಇದಕ್ಕೆ ಅನ್ನವಿಟ್ಟ ತಟ್ಟೆಯನ್ನು, ಅದು ತಿಂದಾದ ಮೇಲೆ ತೊಳೆಯಬೇಕು. ಮತ್ತೆ ಅದರ ಮೇಲೆಯೇ ಅನ್ನ ಹಾಕಿದರೆ ಅದು ಮುಟ್ಟಲಾರದು. ಉಪಾವಾಸ ಬಿದ್ದು ಸತ್ತೀತು !" ಎಂದು ಎಚ್ಚರಿಕೆ ಕೊಟ್ಟು ಹೇಳಿದ್ದಳು.

ಅವಳು ಹೋದ ಮರುಕ್ಷಣದಿಂದ ಬೆಕ್ಕು ಕಿವಿ ಕೊರೆಯುವಂತೆ ಕೂಗುತ್ತಾ ಮನೆಯೊಳಗೆಲ್ಲಾ ತಿರುಗತೊಡಗಿತು. ನಾಲ್ಕು ದಿನಗಳಿಂದ ಹಾಲೂ ಅನ್ನ ಮುಟ್ಟಲಿಲ್ಲ ಆ ಬೆಕ್ಕು. ಕಡೆಗೆ ಗೋಡೆಯ ಮೂಲೆಯಲ್ಲಿ ಏಳಲಾಗದೆ ಬಿದ್ದುಕೊಂಡಿತ್ತು. ಹೆಂಡತಿ ಹಿಂದಿರುಗುವ ಸಮಯಕ್ಕೆ ಅದು ಕಣ್ಣುಗಳನ್ನು ತೇಲಬಿಟ್ಟು ಹೆಣವಾಗಿ ಹೋಗಿತ್ತು. ಹೆಂಡತಿ ಏನು ಮಾಡುವಳೋ ಎಂಬ ಭಯದಿಂದ ಗಂಡನು ಆ ಬೆಕ್ಕಿನ ದೇಹವನ್ನು ಗೋಣಿಯೊಳಗೆ ಹಾಕಿ, ಅಟ್ಟದ ಮೇಲೆ ಅಡಗಿಸಿಟ್ಟನು.

ಅವನ ಹೆಂಡತಿ ಮನೆಗೆ ಬಂದ ಕೂಡಲೇ "ಎಲ್ಲಿ ನನ್ನ ಮುದ್ದು ಬೆಕ್ಕು ?" ಎಂದು ಅದನ್ನು ಕರೆಯುತ್ತಾ ಮನೆಯೆಲ್ಲಾ ಹುಡುಕತೊಡಗಿದಳು.

ಬೆಕ್ಕು ಸತ್ತು ಹೋಯಿತೆಂದು ಹೇಳಿದರೆ ಅವಳು ತನ್ನನ್ನು ಚಿತ್ರಹಿಂಸೆಗೆ ಗುರಿಪಡಿಸುವಳೆಂದು ತಿಳಿದಿದ್ದ ಗಂಡನು, "ನೀನು ಹೋದ ಮೇಲೆ ಆ ದಿನ ರಾತ್ರಿ ಅದು ನಿನ್ನ ಚಿಂತೆಯಿಂದ ಎಲ್ಲಿಗೋ ಹೊರಟು ಹೋಯಿತು, ಈಗ ನೀನು ಬಂದೆಯಷ್ಟೆ ? ಇನ್ನು ಅದೂ ಬಂದೀತು. ಎಲ್ಲಿಗೆ ಹೋದೀತು? ನಿನ್ನ ವಾಸನೆ ಹಿಡಿದು ಖಂಡಿತಾ ಬರುತ್ತೆ" ಎಂದು ಸಮಾಧಾನ ಹೇಳಿದನು.

ಅವಳು ಬೆಕ್ಕಿನ ಚಿಂತೆಯಿಂದ ಊಟ ಮಾಡದೆ ಅಳುತ್ತಾ ಮಲಗಿದ್ದಳು. ಅವಳಿಗೆ ನಿದ್ದೆ ಹಿಡಿಯಿತೆಂದು ತಿಳಿದಕೂಡಲೇ ಅವಳ ಗಂಡನು ಅಟ್ಟದಿಂದ ಬೆಕ್ಕಿನ ಗೋಣಿಯನ್ನು ತೆಗೆದುಕೊಂಡು ಬಂದು ಅದನ್ನು ಹುಗಿಯಲು ಹೀಗೆ ಕುಳಿತಿದ್ದಾನೆ.

ರಮಾಪತಿಯ ಸಹಾಯದಿಂದ ಬೇಗದಲ್ಲೇ ಗುಂಡಿ ಸಿದ್ಧವಾಯಿತು. ಅಷ್ಟರಲ್ಲಿ ಮನೆಯ ಬಾಗಿಲು ತೆರೆದು ಅವನ ಹೆಂಡತಿ, "ಆ ಕತ್ಲೇಲಿ ಏನ್ಮಾಡ್ತೀರೀಂದ್ರೇ !" ಎಂದು ಕೇಳಿದಳು.

ಹೆಂಡತಿ ಎದ್ದು ಬಂದುದನ್ನು ತಿಳಿದಕೂಡಲೇ ಯಜಮಾನನು ಗಾಬರಿಬಿದ್ದು, ಗೋಣಿಯನ್ನು ಗುಂಡಿಯೊಳಗೆ ದೂಡಿ, "ಇದೋ ಬಂದೆ, ಬಂದೆ" ಎಂದು, ರಮಾಪತಿಯೊಂದಿಗೆ, "ನಾನು ಹೋಗ್ತೇನೆ. ನೀನು ಗುಂಡಿಗೆ ಮಣ್ಣುಮುಚ್ಚಿ ಸದ್ದಿಲ್ಲದೆ ಹೋಗಿಬಿಡು" ಎಂದು ಪಿಸುಗುಟ್ಟಿ, ಹೆಂಡತಿಯ ಇದಿರಿಗೆ ಹೋದನು. ಇಬ್ಬರೂ ಮನೆಯೊಳಗೆ ಹೊಕ್ಕು ಬಾಗಿಲು ಹಾಕಿಕೊಂಡರು.

ರಮಾಪತಿ ಗುಂಡಿಯೊಳಗೆ ಅಷ್ಟು ಮಣ್ಣುಹಾಕಿ ಮುಚ್ಚಿ, ತನ್ನ ಹಲಸಿನಕಾಯಿ ಗೋಣಿಯನ್ನು ಹೊತ್ತುಕೊಂಡು ಬೀದಿ ಬಾಗಿಲಿನಿಂದ ಹೊರಗೆ

ಹೋದನು. ದಾರಿಯಲ್ಲಿ ಗಸ್ತೀ ತಿರುಗುವ ಇಬ್ಬರು ಭಟರು ಅವನನ್ನು ನೋಡಿ ಗಟ್ಟಿಯಾಗಿ, "ಯಾರದು, ನಿಲ್ಲಲ್ಲಿ !" ಎಂದರು.

ಹೆಗಲ ಮೇಲೆ ಗೋಣೀಚೀಲ ಹೊತ್ತುಕೊಂಡು ಕತ್ತಲೆಯಲ್ಲಿ ನಡೆದು ಹೋಗುತ್ತಿದ್ದ ರಮಾಪತಿ ಯನ್ನು ನೋಡಿ ಗಸ್ತೀ ಭಟರಿಗೆ ಸಂದೇಹವಾಗಿ, "ಈ ನಡುರಾತ್ರಿಯಲ್ಲಿ ಯಾರ ಮನೆಯಿಂದ ಕದ್ದು ಕೊಂಡು ಹೋಗುವಿ ? ಏನಿದು ಚೀಲ ?" ಎಂದರು ಜೋರಿನಿಂದ.

ರಮಾಪತಿ ಭಯಪಟ್ಟು "ಅಯ್ಯಯ್ಯೋ ! ಅಂಥಾದ್ದೇನಿಲ್ಲರೀ. ನಾನು ಕಳ್ಳನಲ್ಲ. ನನ್ನ ಹೆಂಡತಿ ಗಾಗಿ ಹಲಸಿನಕಾಯಿ ಹೊತ್ತುಕೊಂಡು ಹೋಗ್ತಾ ಇದ್ದೇನೆ. ಹೊರಡುವಾಗ ಹೊತ್ತಾಗಿ ಹೋಯ್ತು ಅಷ್ಟೇ" ಎಂದನು.



"ಈ ಮಾತು ನಾವು ನಂಬಬೇಕು, ಹೌದಾ ?" ಎಂದು ಒಬ್ಬ ಭಟನು ಕೈಯಲ್ಲಿದ್ದ ಕೋಲಿನಿಂದ ಗೋಣಿಯನ್ನು ತಿವಿದನು. ಆಗ ಗೋಣಿಯೊಳಗಿ ನಿಂದ "ಮ್ಯಾಂವ್" ಎಂಬ ಬೆಕ್ಕಿನ ಶಬ್ದವು ಕೇಳಿಸಿತು.

ರಮಾಪತಿ ಪೆಟ್ಟಬಿದ್ದನು. ಹೆಂಡತಿ ಬರುವ ಳೆಂಬ ಗಾಬರಿಯಲ್ಲಿ ಮನೆಯ ಯಜಮಾನನು ಹಲಸಿನಕಾಯಿ ಗೋಣಿಯನ್ನು ಗುಂಡಿಯೊಳಗೆ ದೂಡಿದನೆಂದಾಯಿತು. ತಾನು ಕೂಡಾ ಗಡಿಬಿಡಿ ಯಲ್ಲಿ ಮಣ್ಣಿನ ಹೆಂಟೆಗಳೊಂದಿಗೆ ಬೆಕ್ಕಿನ ಗೋಣಿ ಯನ್ನು ತನ್ನದೇ ಗೋಣಿ ಮೂಟೆ ಎಂದುಕೊಂಡು ತಂದಿದ್ದೇನೆ ! ಸತ್ತುದಾಗಿ ನಂಬಿದ ಬೆಕ್ಕು ಸಾಯಲಿಲ್ಲ ವೆಂದೂ ಆಯಿತು. ಹಸಿದು ಬಲಗುಂದಿ ಸತ್ತಹಾಗೆ ಬಿದ್ದಿರಬೇಕು ಅದು !

ಗಸ್ತೀ ಭಟರಿಬ್ಬರೂ ಬೆಕ್ಕಿನ ಧ್ವನಿ ಕೇಳಿ ಗಹಗಹಿಸಿ ನಗುತ್ತ, "ನಿನ್ನ ಹೆಂಡತಿ ಬೆಕ್ಕನ್ನು ಹಲಸಿನಕಾಯೇ ಎಂದು ಕರೀತಾಳೇನೋ ? ನೀನು ಯಾವನೋ ಮಂತ್ರಗಾರನೆಂದು ನಮ್ಮ ಅನುಮಾನ. ಆದ್ದ ರಿಂದಲೇ ಬೆಕ್ಕಿನೊಂದಿಗೆ ಏನೋ ಮಾಟಮಾಡಲಿಕ್ಕೆ ಸುಡುಗಾಡಿಗೆ ಹೊರಟಿದ್ದೀ. ಬೆಳಗಾದ ಮೇಲೆ ನಿನ್ನ ನಿಜಸ್ವರೂಪ ಬಯಲಿಗೆಳೆಯುತ್ತೇವೆ. ಈಗ ನಡೀ ಚಾವಡಿಗೆ !" ಎಂದರು. ರಮಾಪತಿ ಎಷ್ಟು ಹೇಳಿ ದರೂ ಕೇಳದೆ ಅವನನ್ನು ಕರೆದೊಯ್ದು ಕೊತ್ವಾಲ ಚಾವಡಿಯ ಕೋಣೆಯಲ್ಲಿ ಬಂಧಿಸಿಟ್ಟರು.

ಬೆಳಗಾಗಿ ಅಷ್ಟು ಹೊತ್ತಾದ ಮೇಲೆ ಜಮಾ ದಾರನು ಅಲ್ಲಿಗೆ ಬಂದನು. ರಾತ್ರಿಯ ಗಸ್ತೀಭಟರು ಅವನೊಂದಿಗೆ "ರಾತ್ರಿಯಲ್ಲಿ ಒಬ್ಬನನ್ನು ಹಿಡಿದೆವು. ಅವನು ಕಳ್ಳನೋ ಮಂತ್ರಗಾರನೋ ಎಂದು ನಮ್ಮ ಅನುಮಾನ" ಎಂದು ಹೇಳಿ, ಅವನನ್ನು ರಮಾಪತಿ ಇರುವ ಕೋಣೆಗೆ ಕರೆದುಕೊಂಡು ಹೋದರು.

ಜಮಾದಾರ್ ಅಧಿಕಾರಿಯನ್ನು ನೋಡಿ ರಮಾ ಪತಿಗೆ ಆಶ್ಚರ್ಯವಾಯಿತು. ರಾತ್ರಿಯಲ್ಲಿ ಹಲಸಿನ

ಕಾಯಿ ಕದ್ದಾಗ, ಅವನನ್ನೇ ಹೆಂಡತಿಯೆಂದರೆ ಹೆದರಿ ನಡುಗುವ ರೀತಿಯಲ್ಲಿ ನೋಡಿದ್ದನು.

ರಮಾಪತಿಯನ್ನೂ. ಅವನ ಪಕ್ಕದಲ್ಲಿರುವ ನಿತ್ರಾಣದ ಬೆಕ್ಕನ್ನೂ ನೋಡಿದ ಕೂಡಲೇ ಜಮಾದಾರನಿಗೆ ನಡೆದ ಸಂಗತಿ ಏನೆಂದು ಗೊತ್ತಾಗಿ ಹೋಯಿತು. ತಾನು ಸತ್ತುಹೋಯಿತೆಂದುಕೊಂಡ ಬೆಕ್ಕು ಬದುಕಿರುವುದನ್ನು ನೋಡಿ ಅವನಿಗಾದ ಆನಂದವು ಅಷ್ಟಿಷ್ಟಲ್ಲ. ಇನ್ನು ತಾನು ಹೆಂಡತಿಗೆ ಹೆದರಬೇಕಾದ ಅಗತ್ಯವೇನಿಲ್ಲ. ಬೆಕ್ಕು ಅವಳನ್ನು ಹುಡುಕುತ್ತಾ ಬಂತೆಂದರೆ ಸಾಕು. ಸಂತೋಷದಿಂದ ಕುಣಿಯುತ್ತಾಳೆ.

ಅವನು ಗಸ್ತೀ ಭಟರನ್ನು ನೋಡಿ ಕಣ್ಣು ಕೆರಳಿಸಿ, "ನಿಮ್ಮ ಅನುಮಾನಕ್ಕೆ ಬೆಂಕಿ ಬಿತ್ತು. ಇವನು ಬಹಳ ಕಾಲದಿಂದ ನನಗೆ ಗೊತ್ತಿರುವವನೇ. ಮರ್ಯಾದೆಯ ದೊಡ್ಡ ಮನುಷ್ಯ. ಇಂಥವನನ್ನು ಮಂತ್ರವಾದಿ ಎನ್ನುವ ನಿಮ್ಮ ಬುದ್ಧಿಗೆ ಪೊರಕೇ ಇನಾಮು ಕೊಡಬೇಕು. ಹೋಗಿರಾಚೆ ನನ್ನ ಕಣ್ಣೆದಿರಿನಿಂದ!" ಎಂದು ರೇಗಿ, ರಮಾಪತಿಯನ್ನು ಆದರದಿಂದ ಕರೆದು, "ಕ್ಷಮಿಸಿ ಹೀಗಾದ್ದಕ್ಕೆ. ನಮ್ಮ ಮುದ್ದು ಬೆಕ್ಕಿನ ಪ್ರಾಣದಾತರು ನೀವು. ನಿಮ್ಮ ಋಣ ಹೇಗೆ ತೀರಿಸುವುದೋ ತಿಳಿಯದು. ನಿಮ್ಮ ಹೆಂಡತಿಯ ಆಸೆಯ ಹಲಸಿನ ಹಣ್ಣನ್ನು ನಾನು ಹೂಳಿಹಾಕಿದೆ. ಹೋಗಲಿ, ಅದನ್ನು ತೆಗೆದು ಇಟ್ಟಿರುತ್ತೇನೆ. ಈಗ ಮನೆಗೆ ಹೋಗುವಾಗ ಒಳ್ಳೆಯ ಹಣ್ಣನ್ನು ಕೊಂಡುಕೊಂಡು ಹೋಗಿರಿ" ಎಂದು, ಅವನು ಬೇಡವೆಂದರೂ ಕೇಳದೆ ಒತ್ತಾಯದಿಂದ ಇಪ್ಪತ್ತು ರೂಪಾಯಿ ಕೊಟ್ಟನು ಜಮಾದಾರ.

ರಮಾಪತಿ ಅತ್ಯಾನಂದದಿಂದ ಹೊರಟು, ಅಂಗಡಿಯಲ್ಲಿ ಹಲಸಿನ ಹಣ್ಣು ಕೊಂಡುಕೊಂಡು ತನ್ನ ಮನೆಗೆ ಹೋದನು.

ಆಗ ಅವನ ಮನೆಯ ಬಾಗಿಲಲ್ಲಿ ಹೊರಗೆ ಬರುತ್ತಿದ್ದ ಸೂಲಗಿತ್ತಿ ವೆಂಕಮ್ಮ ರಮಾಪತಿಯನ್ನು ನೋಡಿ, "ರಾತ್ರಿಯಲ್ಲಿ ಎಲ್ಲಿಗೆ ಹೋದಿರಯ್ಯಾ" ಎಂದು ತುಸು ಕೋಪದಿಂದ ಕೇಳಿದಳು.

ಏನು ಹೇಳಲೂ ತೋರದೆ ರಮಾಪತಿ ಬೆಪ್ಪು ಬಡಿದಂತೆ, "ಮ-ಮತ್ತೇನಿಲ್ಲ. ಒಂದು ಹಲಸಿನ ಹಣ್ಣು ತರಲು..." ಎನ್ನುತ್ತಿರಲು ವೆಂಕಮ್ಮ ನಕ್ಕು, "ಹೆಂಡ್ತೀ ಕೇಳಿದಳೋ? ಇನ್ನು ಇದು ಬೇಡ. ಇದೇ ಈಗ ಸ್ವಲ್ಪ ಹೊತ್ತಿನ ಮುಂಚೆ ಹಲಸಿನ ಹಣ್ಣಿನಂಥ ನಿಮ್ಮ ಮಗ ಬಾಬು ಬಂದಿದ್ದಾನೆ. ನೋಡಿ, ಪಕ್ಕದ ಮನೇವರು ಓಡಿಬಂದು ನನ್ನನ್ನು ಕರಕೊಂಡು ಬಂದ್ರು. ತಾಯೀ ಮಗೂ ಕ್ಷೇಮ" ಎಂದಳು. ಕ್ಯಾವೆಂದು ಮಗುವಿನ ಧ್ವನಿ ರಮಾಪತಿಯ ಕಿವಿಗೆ ಬಿದ್ದು ಮೈ ಪುಲಕಿತವಾಯಿತು.





# ಮರದ ನೆರಳು

ಒಂದಾನೊಂದು ಕಾಲದಲ್ಲಿ ಗುಂಜಾಲನೆಂಬೊಬ್ಬನ ಮನೆಯ ಮುಂದೆ, ದಾರಿಯ ಬದಿಯಲ್ಲಿ ದೊಡ್ಡ ದೊಂದು ಹೊನ್ನೇಮರವಿದ್ದಿತು. ಬೇಸಗೆ ಕಾಲದಲ್ಲಿ ಅದರ ನೆರಳು ಸೊಗಸಾಗಿರುವುದರಿಂದ ಗುಂಜಾಲನು ದಿನಾ ಅಲ್ಲಿಗೆ ಬಂದು ಕುಳಿತು, ತಣ್ಣಗಿನ ನೆರಳಿನ ಸುಖ ವನ್ನು ಅನುಭವಿಸಿಕೊಳ್ಳುತ್ತಿದ್ದನು.

ಒಂದು ದಿನ ಮಧ್ಯಾಹ್ನ ಊಟ ಮುಗಿಸಿಕೊಂಡು ಗುಂಜಾಲನು ಆ ಮರದ ನೆರಳಿನಲ್ಲಿ ಕುಳಿತು, ಭುಕ್ತಾಯಾಸ ತೀರಿಸಿಕೊಳ್ಳಲು ಬಂದನು. ಆಗ ಅಲ್ಲಿ, ಯಾವನೋ ಒಬ್ಬ ದಾರೀ ಹೋಕನು ಈ ಮೊದಲೇ ಬಂದು ಕುಳಿತಿದ್ದನು, ಅವನು ಕೆಲಸ ಬೊಗಸೆಯಿಲ್ಲದ ತಿರುಗಾಳಿ ಮನುಷ್ಯ.

"ಇದೇನಿದು ? ನಿನ್ನನ್ನು ಇಲ್ಲಿ ಕುಳಿತುಕೊಳ್ಳಲು ಯಾರು ಹೇಳಿದರು ? ಏಳೇಳು !" ಎಂದು ಆ ತಿರು ಗಾಳಿಯನ್ನು ಎಬ್ಬಿಸಲು ನೋಡಿದನು ಗುಂಜಾಲ.

"ಏಕೆ, ನಾನೇಕೆ ಏಳಬೇಕು ? ಕೋಪಮಾಡುವಿ ರೇಕೆ ? ಬಿಸಿಲು ತೀವ್ರವಾಗಿದ್ದುದರಿಂದ, ನೆರಳು ಚೆನ್ನಾಗಿದೆ ಅನಿಸಿ ಇಲ್ಲಿ ಕೂತಿದ್ದೇನೆ, ಅಷ್ಟೇ. ಏನಾಗಿ ಹೋಯಿತು ಈಗ?" ಎಂದನು ಆ ಮನುಷ್ಯ.

"ಓಹೊ ! ನೆರಳಿನ ಸುಖಕ್ಕಾಗಿ ಅನ್ನು ! ಅದೆಲ್ಲಾ ಸಾಧ್ಯವಿಲ್ಲ. ಆ ಮರ ನನ್ನದು. ನಾನು ಇದಕ್ಕೆ ಎಷ್ಟೋ ವರ್ಷಗಳಿಂದ ನೀರು ಹಾಕಿ ಪೋಷಿಸಿ ಕಷ್ಟಪಟ್ಟು ಇಷ್ಟು ದೊಡ್ಡದು ಮಾಡಿದ್ದೇನೆ. ಆದ್ದರಿಂದ ಇದರ ನೆರಳು ಕೂಡಾ ನನ್ನದೇ" ಎಂದನು ಗುಂಜಾಲ.

"ಹಾಗೇನು ? ಹಾಗಿದ್ದರೆ ಒಂದು ಕೆಲಸ ಮಾಡಿ. ಈ ನೆರಳು ನನಗೆ ಮಾರಿಬಿಡಿರೇನು ? ಹಣ ಕೊಡು ತ್ತೇನೆ" ಎಂದನು ತಿರುಗಾಳಿ.

ಆದಕ್ಕೆ ಒಪ್ಪಿ ಗುಂಜಾಲನು ನೆರಳಿನ ಉದ್ದಗಲ ಅಳೆದು ಲೆಕ್ಕ ಹಾಕಿ ಇನ್ನೂರು ರೂಪಾಯಿಗೆ ನೆರಳನ್ನು ಮಾರುವೆನೆಂದನು. ಚೌಕಾಸಿ ನಡೆಯಿತು. ದಾರಿಯಲ್ಲಿ ಹೋಗುವ ಇಬ್ಬರು ಮೂವರ ಸಮ ಕ್ಷಮದಲ್ಲಿ ನೂರು ರೂಪಾಯಿ ಕೊಟ್ಟು ತಿರುಗಾಳಿ, ಆ ಮರದ ನೆರಳನ್ನು ಕೊಂಡುಕೊಂಡನು.

ಅಂದಿನಿಂದ ತಿರುಗಾಳಿ ದಿನಾ ಬಂದು ಆ ಮರದ ನೆರಳಿನಲ್ಲಿ ಕುಳಿತುಕೊಳ್ಳಲು ಪ್ರಾರಂಭಿಸಿದನು. ದಾರಿ ಯಲ್ಲಿ ಅವನ ಪರಿಚಿತರಾರಾದರೂ ಹೋಗುತ್ತಿದ್ದರೆ ಅವರನ್ನು ಕೂಡಾ ಕರೆದು ತನ್ನ ಜತೆಯಲ್ಲಿ ಕೂಡಿಸಿ

ಕೊಳ್ಳುತ್ತಿದ್ದನು. ಗುಂಜಾಲನು ಬಂದರೆ ಮಾತ್ರ ನೆರಳಿನಲ್ಲಿ ಕುಳಿತುಕೊಳ್ಳಲು ಬಿಡುತ್ತಿದ್ದಿಲ್ಲ.

ಇದರ ಮೇಲೆ ಇನ್ನೊಂದು ಸಂಗತಿ ಕೂಡಾ ನಡೆಯಿತು. ಮರದ ನೆರಳು ಎಲ್ಲೆಲ್ಲ ಬೀಳುವುದೋ ಅಲ್ಲೆಲ್ಲಾ ಅವನು ಠಿಷ್ಠೆ ಹಾಕುತ್ತಿದ್ದನು, ಗುಂಜಾಲನ ಮನೆಯ ಆವರಣದೊಳಗೂ, ಜಗಲಿಯ ಮೇಲೂ ನೆರಳು ಸೂರ್ಯನ ಅಯನಕ್ಕೆ ಸರಿಯಾಗಿ ಬೀಳುತ್ತಿತ್ತು. ಬಿದ್ದಲ್ಲಿ ನಿರ್ದಾಕ್ಷಿಣ್ಯವಾಗಿ ತಿರುಗಾಳಿ ಬಂದು ಕೂಡುತ್ತಿದ್ದನು.

ಇದನ್ನೆಲ್ಲಾ ನೋಡಿ ಗುಂಜಾಲನಿಗೆ ಸಿಟ್ಟು ತಡೆಯಲಾಗಲಿಲ್ಲ. "ಏಯ್," ನಮ್ಮ ವಠಾರದೊಳಗೂ, ಮನೆಯೊಳಗೂ ಬಂದು ಕುಳಿತುಕೊಳ್ಳಲು ನಿನಗೇನು ಹಕ್ಕಿದೆ?" ಎಂದು ತಿರುಗಾಳಿಯನ್ನು ಗದರಿಸಿ ಕೇಳಿದನು.

"ಮರೆತು ಬಿಟ್ಟಿರೇನ್ರೀ ? ನಾನು ನಿಮ್ಮ ಮರದ ನೆರಳನ್ನು ಹಣ ಕೊಟ್ಟು ಕೊಂಡು ಕೊಂಡಿದ್ದೇನಲ್ಲ ? ಅದು ಎಲ್ಲೆಲ್ಲಿ ಬೀಳುವುದೋ ಅಲ್ಲೆಲ್ಲಾ ಕೂತುಕೊಳ್ಳಲು ನನಗೆ ಹಕ್ಕಿದೆ. ಕುಳಿತುಕೊಳ್ಳಬೇಡವೆನ್ನಲು ನಿಮಗೇ ಹಕ್ಕಿಲ್ಲ. ಬೇಕಾದರೆ ನಾಲ್ಕು ಜನರನ್ನು ಕೇಳಿ ನೋಡ್ರೀ" ಎಂದನು ತಿರುಗಾಳಿ.

ಗುಂಜಾಲನು ಗುಣಗುಟ್ಟಿದನು. ತಾನು ಆ ಮರದ ನೆರಳನ್ನು ಅವನಿಗೆ ಮಾರಿದುದು ನಿಜವೇ.

ಒಂದು ದಿನ ಗುಂಜಾಲನ ಮನೆಯಲ್ಲಿ ಏನೋ ವಿಶೇಷ ಸಮಾರಾಧನೆ. ಅವನ ಬಂಧು ಬಳಗದ ಬೇಕಾದವರೆಲ್ಲ ಬಂದಿದ್ದರು. ಔತಣದ ಊಟ ನಡೆಯುವಾಗ, ಆ ಸ್ಥಳಕ್ಕೆ ಮರದ ನೆರಳು ಬಂದು ಬಿತ್ತು. ಆಗ ತಿರುಗಾಳಿ ನೇರಾಗಿ ಬಂದು ಆ ನೆರಳಿನಲ್ಲಿ ಅವನ ಪಾಡಿಗೆ ಕುಳಿತನು. ಬಂದ ಅತಿಥಿಗಳಿಗೆ ಇದೇನೆಂದು ಅರ್ಥವಾಗಲಿಲ್ಲ. "ಕರೆಯದ ನೆಂಟನ ಹಾಗೆ ಇವನಾರೋ ಒಬ್ಬ ಬಂದು ಕುಳಿತನೇಕೆ ? ಏನಿದು ?" ಎಂದು ಅವರು ಒಬ್ಬರೊಡನೆ ಒಬ್ಬರು ಪ್ರಶ್ನಿಸಿಕೊಂಡರು.

ತಿರುಗಾಳಿ ತಾನು ಆ ಮರದ ನೆರಳನ್ನು ಕೊಂಡುಕೊಂಡ ಸಂಗತಿಯನ್ನು ಅವರೊಂದಿಗೆ ಹೇಳಿ, "ನ್ಯಾಯವಾಗಿ ಈ ಸ್ಥಳದಲ್ಲಿ ನೀವು ನನ್ನನ್ನು ಕೇಳಿಕೊಂಡ ಮೇಲೆಯೇ ಕೂಡಬೇಕಿತ್ತು" ಎಂದನು ತಿರುಗಾಳಿ.

ಈ ವಿಚಿತ್ರ ಸಂಗತಿಯನ್ನು ಕೇಳಿ ಎಲ್ಲರೂ ಗೊಳ್ಳನೆ ನಕ್ಕರು. ಅಷ್ಟು ಮಂದಿಯ ಮುಂದೆ ಗುಂಜಾಲನಿಗೆ ತಲೆ ಎತ್ತಲು ಸಾಧ್ಯವಾಗದೆ ಹೋಯಿತು.

ಮರುದಿನ ಅವನು ತನ್ನ ಕುಟುಂಬದೊಂದಿಗೆ ಆ ಊರನ್ನು ಬಿಟ್ಟು ಮತ್ತೊಂದು ದೂರದ ಗ್ರಾಮಕ್ಕೆ ಹೊರಟುಹೋದನು.






**ವಾ**ಲಿಯ ಮರಣಾನಂತರ ಸುಗ್ರೀವನು ನಿಷ್ಕಂಟಕನಾಗಿ ಕಿಷ್ಕಿಂಧೆಯ ರಾಜನಾದನು. ಅದರೊಂದಿಗೇ ಸುಗ್ರೀವನು ವಾಲಿಯ ಕುಮಾರನಾದ ಅಂಗದನನ್ನು ಯುವರಾಜನನ್ನಾಗಿ ಪಟ್ಟಾಭಿಷೇಕ ಮಾಡಿದನು. ಆಮೇಲೆ ಸುಗ್ರೀವನು ರಾಜಕಾರ್ಯಗಳನ್ನೆಲ್ಲಾ ಯುವರಾಜನಿಗೆ ಒಪ್ಪಿಸಿ, ತಾನು ಸುಖಭೋಗಗಳಲ್ಲಿ ತೇಲುತ್ತ, ರಾಮನ ಸಂಗತಿಯನ್ನೇ ಮರೆತುಬಿಟ್ಟನು. ಕಡೆಗೆ ಲಕ್ಷ್ಮಣನು ಧನುಷ್ಟಂಕಾರ ಮಾಡುತ್ತ ಕಿಷ್ಕಿಂಧೆಯನ್ನು ಪ್ರವೇಶಿಸಿದಾಗ. ಹನುಮಂತನು ಸುಗ್ರೀವನಿಗೆ ರಾಮಕಾರ್ಯದ ನೆನಪು ಮಾಡಲು ಅದೇ ತತ್‌ಕ್ಷಣ ಕರ್ತವ್ಯವೆಂಬ ಪ್ರಜ್ಞೆ ಬಂದಿತು ಸುಗ್ರೀವನಿಗೆ.

ಕೂಡಲೇ ಸುಗ್ರೀವನು ತೀವ್ರ ಕಾರ್ಯರಂಗಕ್ಕಿಳಿದು, ಸೀತೆಯನ್ನು ಶೋಧಿಸಲು ನಾಲ್ಕು ದಿಕ್ಕುಗಳಿಗೂ ವಾನರರನ್ನು ಕಳುಹಿಸಿದನು. ಅಂಗದ, ಹನುಮಂತ, ಜಾಂಬವಂತ ಮೊದಲಾದವರೆಲ್ಲಾ ದಕ್ಷಿಣ ದಿಕ್ಕಿಗೆ ಹೊರಟರು. ಆಗ ರಾಮನು ತನ್ನ ಬೆರಳಲ್ಲಿದ್ದ ಉಂಗುರವನ್ನು ಹನುಮಂತನ ಕೈಗೆ ಕೊಟ್ಟು, ಅದನ್ನು ಸೀತೆಗೆ ತನ್ನ ಗುರುತಾಗಿ ಕೊಡುವಂತೆ ಹೇಳಿದನು. ಆ ವಾನರರೆಲ್ಲಾ ದಕ್ಷಿಣ ಸಮುದ್ರ ತೀರದ ಪ್ರಾಂತವನ್ನು ಸೇರಿ, ಮುಂದಿನ ದಾರಿ ಕಾಣದೆ. "ರಾವಣನು ಸೀತಾ ಅಮ್ಮನವರನ್ನು ಎತ್ತಿಕೊಂಡು ದಕ್ಷಿಣ ದಿಕ್ಕಿಗೆ ಹೋದನೆಂದು ಜಟಾಯು ಪಕ್ಷಿ ರಾಜನು ಹೇಳಿದನೇ ಹೊರತು, ಎಲ್ಲಿಗೆ ಹೋದ, ಎಲ್ಲಿ ಅಡಗಿಸಿಟ್ಟ ಎಂಬುದೊಂದೂ ತಿಳಿಯಲಿಲ್ಲ. ಆದಾರು ಹೇಳುವರೋ ?" ಎಂದು ವಾನರರು ತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು. ಆ ವಾನರರನ್ನು ಕಬಳಿಸಬೇಕೆಂದು ಜಟಾಯುವಿನ ಅಣ್ಣನಾದ ಸಂಪಾತಿ ತೆವಳಿಕೊಂಡು ಬರುತ್ತಿದ್ದವನು, ತಮ್ಮನ ಹೆಸರು ವಾನರರ ಬಾಯಿಯಿಂದ ಬಂದದನ್ನು ಕೇಳಿ ಬೆರಗಾದನು.

ಒಂದು ಕಾಲದಲ್ಲಿ ಸಂಪಾತಿಯೂ ಜಟಾಯುವೂ ಸೂರ್ಯಮಂಡಲಕ್ಕೆ ಹಾರುವ ಪಂಥವನ್ನು ಕಟ್ಟಿಕೊಂಡು ಆಕಾಶದಲ್ಲಿ ಹಾರತೊಡಗಿದರು. ಆಗ ಜಟಾಯು ಹಾರಲಾಗದೆ, ಹಿಂದಿರುಗಿಬಿಟ್ಟನು.



ಸಂಪಾತಿ ಮಾತ್ರ ಮತ್ತಷ್ಟು ಮೇಲಕ್ಕೆ ಹಾರಿದುದರಿಂದ ರೆಕ್ಕೆಗಳೆರಡೂ ಸುಟ್ಟು ದಕ್ಷಿಣ ಸಮುದ್ರ ತೀರದಲ್ಲಿ ಬಿದ್ದು ಬಿಟ್ಟಿದ್ದನು. ಹಾಗೆ ಮೊಂಡನಾಗಿ ಬಿದ್ದ ಸಂಪಾತಿ ಅಲ್ಲಿ ದೊರೆತ ಪ್ರಾಣಿಗಳನ್ನು ಕಬಳಿಸುತ್ತ ಬದುಕಿಕೊಂಡಿದ್ದನು.

ಸಂಪಾತಿ ವಾನರರಿಂದ ನಡೆದ ಸಮಾಚಾರವನ್ನೆಲ್ಲಾ ತಿಳಿದು, ಅಂಗದನನ್ನು ತನ್ನ ಭುಜದ ಮೇಲೆ ಏರಿಸಿಕೊಂಡು ನೆಟ್ಟಗೆ ನಿಂತು, ದೂರದಲ್ಲಿ ಸಮುದ್ರದಾಚೆಗೆ ಕಾಣುವ ಲಂಕೆಯನ್ನು ಅವನಿಗೆ ತೋರಿಸಿ, ಸೀತೆ ಅಲ್ಲಿರುವಳೆಂದು ಹೇಳಿದನು.

ಶತಯೋಜನದಷ್ಟು ದೂರದವರೆಗೆ ಸಮುದ್ರವನ್ನು ಹಾರಿ ಲಂಕೆಯನ್ನು ತಲಪುವವನು ಯಾವನು? ವಾನರರಿಗೆ ಇದೊಂದು ದೊಡ್ಡ ಪ್ರಶ್ನೆಯಾಯಿತು.

ಹನುಮಂತನಿಗೆ ಅವನ ಶಕ್ತಿ ಸಾಮರ್ಥ್ಯಗಳು ತಿಳಿಯದಂತೆ ಬಾಲ್ಯದಲ್ಲಿಯೇ ಋಷಿಗಳಿಂದ ಶಾಪ ಬಂದಿತ್ತು. ಹುಡುಗಾಟದ ಕಾಲದಲ್ಲಿ ಅವನ ಉಪದ್ರಗಳನ್ನು ತಾಳಲಾಗದೆ, ಋಷಿಗಳು ಅವನಿಗೆ ಹಾಗೆ ಶಪಿಸಿದ್ದರು. ಇದನ್ನು ತಿಳಿದುಕೊಂಡಿದ್ದ ಜಾಂಬವಂತನು " ಹನುಮಂತಾ, ನಿನ್ನ ಶಕ್ತಿ ಎಷ್ಟೆಂದು ಇನ್ನೊಬ್ಬರು ಹೇಳಿದರಷ್ಟೇ ನಿನಗೆ ತಿಳಿಯುತ್ತದೆ. ಸಮುದ್ರವನ್ನು ಅವಲೀಲೆಯಿಂದ ಲಂಘಿಸಿ ರಾಮಕಾರ್ಯ ನೆರವೇರಿಸಬಲ್ಲವನು ನೀನೊಬ್ಬನೇ ! ಸಿದ್ಧನಾಗು " ಎಂದು ತಿಳಿಯಪಡಿಸಿದನು.

ಆಗ ಹನುಮಂತನು ರಾಮನನ್ನು ಧ್ಯಾನಿಸಿ, ಪರ್ವತವನ್ನು ಒಂದು ಸಾರಿ ಜಾಡಿಸಿ ಹಾರಿ ಮಹಾವೇಗ ತಂದುಕೊಂಡು ಆಕಾಶಕ್ಕೆ ಲಂಘಿಸಿದನು.

ಮಾರುತಿ ಆಕಾಶ ಮಾರ್ಗದಲ್ಲಿ ಲಂಕೆಗೆ ಹಾರಿಕೊಂಡಿರುವಾಗ, ಅವನ ಶಕ್ತಿಯುಕ್ತಿಗಳನ್ನು ಪರೀಕ್ಷೆ ಮಾಡಲು ದೇವತೆಗಳು ಸುರಸೆಯನ್ನು ಕಳುಹಿಸಿದರು.

ದೇವತಾ ಸ್ತ್ರೀಯಾದ ಸುರಸೆ ಭಯಂಕರ ರಾಕ್ಷಸಾಕಾರವನ್ನು ತಾಳಿ, ಹೆಬ್ಬಾಯಿಯನ್ನು ಅಯೆಂದು ತೆರೆದು ಹನುಮಂತನನ್ನು ನುಂಗಲು ಬಂದಳು. ಹನುಮಂತನು ಶರೀರವನ್ನು ಬೆಳೆಸಿಕೊಂಡಂತೆ, ಸುರಸೆಯೂ ತನ್ನ ಬಾಯಿಯನ್ನು ಅಗಲಿಸಿದಳು. ಹನುಮಂತನು ಇನ್ನಿಷ್ಟು ಬೆಳೆದು, ಅವಳು ಮತ್ತಿಷ್ಟು, ಮೇಲಿಷ್ಟು ಬಾಯ್ತೆರೆದಾಗ ಥಕ್ಕನೆ ಹನುಮಂತನು ಸೂಕ್ಷ್ಮ ರೂಪತಾಳಿ, ಸುರಸೆಯ ಬಾಯಿಯೊಳಗೆ ತೂರಿ, ಮತ್ತೆ ದೇಹವನ್ನು ಬೆಳೆಸಿದನು. ಆಗ ಸುರುಸೆಯ ದೇಹ ಸೀಳಿಹೋಯಿತು. ಹನುಮಂತನು ಹೊರಗೆ ಹಾರಿ ಮುಂದುವರಿಯಲು, ಸುರಸೆ ದೇವತಾಸ್ತ್ರೀಯಾಗಿ ದೇವಲೋಕಕ್ಕೆ ಹೋದಳು.

ಹನುಮಂತನು ಹಾಗೆ ಹಾರುವಾಗ ಸಮುದ್ರದಲ್ಲಿ ಬಿದ್ದ ಅವನ ನೆರಳನ್ನು, ರಾಹುವಿನ ತಾಯಿಯಾದ ಸಿಂಹಿಕೆ ಎಂಬ ಜಲರಾಕ್ಷಸಿ ಹಿಡಿದುಕೊಂಡು ಎಳೆಯತೊಡಗಿದಳು. ಹನುಮಂತನಿಗೆ ತನ್ನನ್ನು ಯಾವುದೋ ಎಳೆಯುವಂತೆನಿಸಿ ಕೆಳಗೆ ಸಿಂಹಿಕೆಯನ್ನು ನೋಡಿ, ಒಂದೇ ಮುಷ್ಟಿ ಘಾತದಿಂದ ಅವಳನ್ನು ಕೊಂದನು.



ಹನುಮಂತನು ಅವರೋಧಗಳನ್ನೆಲ್ಲಾ ಜಯಿಸಿ, ಆಕಾಶ ಮಾರ್ಗದಲ್ಲಿ ಪ್ರಯಾಣ ಮಾಡುತ್ತಿರಲು, ಸುವರ್ಚಲಾ ಎಂಬ ನಾಗರಕನ್ಯೆ ಮೀನಿನ ರೂಪದಲ್ಲಿ ಆಶ್ಚರ್ಯದಿಂದ ಮೇಲೆ ನೋಡುತ್ತಿದ್ದಳು, ಹನುಮಂತನ ಬೆವರಿನ ಬಿಂದುವೊಂದು ಆಕೆಯ ಬಾಯಿಯೊಳಗೆ ಬಿದ್ದಿತು. ಅದರಿಂದ ಸುವರ್ಚಲೆ ಗರ್ಭ ಧರಿಸಿ ಒಬ್ಬ ಕುಮಾರನನ್ನು ಪಡೆದಳು. ಅವನು ಮತ್ಸ್ಯವಲ್ಲಭನೆನಿಸಿ ಅಪಾರ ಶಕ್ತಿಶಾಲಿಯಾಗಿದ್ದನು.

ಒಂದು ಕಾಲದಲ್ಲಿ ಪರ್ವತಗಳಿಗೆಲ್ಲಾ ರೆಕ್ಕೆಗಳಿದ್ದುವು, ಇಂದ್ರನು ಅವುಗಳ ರೆಕ್ಕೆಗಳನ್ನು ತನ್ನ ವಜ್ರಾಯುಧದಿಂದ ಕಡಿಯುತ್ತಾ ಬಂದನು. ಆಗ ಹಿಮವಂತನ ಕುಮಾರನಾದ ಮೈನಾಕನು ವಾಯುವಿನ ಸಹಾಯದಿಂದ ಸಮುದ್ರದಲ್ಲಿ ಅಡಗಿದನು.

ಈಗ ಹನುಮಂತನನ್ನು ನೋಡಿ ಮೈನಾಕನು ಸಮುದ್ರದಲ್ಲಿ ಮೇಲೆದ್ದು, "ಆಂಜನೇಯಾ! ಸ್ವಲ್ಪ ನನ್ನ ಮೇಲೆ ನಿಂತು ಬಳಲಿಕೆ ತೀರಿಸಿಕೊಂಡು ಮುಂದು ಹೋಗಬೇಕೆಂದು ಪ್ರಾರ್ಥಿಸುತ್ತೇನೆ" ಎಂದನು.

ಮೈನಾಕನ ಮಾತನ್ನು ಮನ್ನಿಸಿ ಹನುಮಂತನು, ಕೆಲವು ಕ್ಷಣ ಮೈನಾಕ ಪರ್ವತದ ಮೇಲೆ ಕಾಲೂರಿ ನಿಂತು, ಮತ್ತೆ ರಿವ್ವನೆ ಆಕಾಶಕ್ಕೆ ಹಾರಿದನು.

ಹನುಮಂತನು ದೊಡ್ಡದೊಂದು ಮಿಂಚು ಎರಗಿದಂತೆ ಲಂಕೆಯಲ್ಲಿ ನೆಲಕ್ಕಿಳಿದನು.

ಲಂಕಾ ನಗರವನ್ನು ಸದಾ ರಕ್ಷಿಸಿಕೊಂಡಿರುವ ಲಂಕಿಣಿ ಎಂಬ ಲಂಕಾದೇವತೆ, ಹನುಮಂತನ ಆಗಮನವನ್ನು ಗುರುತಿಸಿ, ಭೀಕರಾಕಾರವನ್ನು ತಾಳಿ ಶೂಲವನ್ನೆತ್ತಿ ತಿವಿಯಲು ಬಂದಳು.

ಹನುಮಂತನು ಸೂಕ್ಷ್ಮ ರೂಪದಿಂದ ತಪ್ಪಿಸಿಕೊಂಡು, ಲಂಕಾದ್ವಾರವನ್ನು ದಾಟುವಾಗ, ಲಂಕಿಣಿ ಹನುಮಂತನನ್ನು ನೊಣ ಹಿಡಿದ ಹಾಗೆ ಹಿಡಿದು ಮುಷ್ಟಿಯೊಳಗಿಟ್ಟುಕೊಂಡಳು. ಆಗ ಹನುಮನು ಅವಳ ಅಂಗೈಯನ್ನು ಕಚ್ಚಿದನು. ಲಂಕಿಣಿ ಮುಷ್ಟಿ ಬಿಡಿಸಿದಳು. ಅವಳ ಅಂಗೈಯಿಂದ ರಕ್ತ ಸುರಿಯುತ್ತಿದ್ದಿತು. ಹನುಮಂತನು ಸರಕ್ಕನೆ ಹಾರಿ, ಮುಷ್ಟಿಯಿಂದ ಲಂಕಿಣಿಯ ಎದೆಯ ಮೇಲೆ ಗುದ್ದಿದನು. ಆ ಮುಷ್ಟಿಘಾತದಿಂದ ಲಂಕಿಣಿ ಮರಗಟ್ಟಿ ಧಿಮ್ಮಾಗಿ ಮಗುಚಿಬಿದ್ದಳು.

ಬಿದ್ದವಳು ಸಮಾಳಿಸಿಕೊಂಡೆದ್ದು, ಹನುಮಂತನಿಗೆ ನಮಸ್ಕಾರ ಮಾಡಿ, "ಜಯಶೀಲಾ! ಯಾವಾಗ ನಾನು ಹೀಗೆ ಬಿದ್ದು ಬಿಡುವೆನೋ, ಆ ದಿನದಿಂದ ಲಂಕೆಗೆ ವಿನಾಶಕಾಲವು ಪ್ರಾಪ್ತವಾಗುವುದೆಂದು ನನಗೆ ಬ್ರಹ್ಮನು ಹೇಳಿದ್ದಾನೆ. ಶಾಪದಿಂದ ನಾನು ಕ್ಷುದ್ರ ದೇವತೆಯಾಗಿ, ಹೀಗೆ ಲಂಕಾ ನಗರವನ್ನು ಬಹುಕಾಲದಿಂದ ಕಾಯುತ್ತಿದ್ದೇನೆ. ಇನ್ನು ನಾನು ಹೋಗುತ್ತೇನೆ. ನೀನೂ ಇನ್ನು ಹೋಗಬಹುದು" ಎಂದು ಹೇಳಿ ಗಂಧರ್ವ ಸ್ತ್ರೀಯಾಗಿ ಆಕಾಶಕ್ಕೆ ಹಾರಿ ಅಂತರ್ಧಾನವಾದಳು.



ಹನುಮಂತನು ಲಂಕಾನಗರವನ್ನು ಪ್ರವೇಶ ಮಾಡಿದನು. ಮಣಿ ದೀಪಗಳೊಂದಿಗೆ ಬೆಳಗುವ ಉನ್ನತೋನ್ನತವಾದ ಸೌಧಗಳಿಂದ ಕಣ್ಣುಗಳನ್ನು ಮಿರಿಮಿರಿಗೊಳಿಸುವ ಲಂಕಾನಗರದ ಸೌಂದರ್ಯವನ್ನೂ, ವೈಭವವನ್ನೂ ನೋಡಿ ಹನುಮಂತನಿಗೆ ಆಶ್ಚರ್ಯವಾಯಿತು. ಅಲ್ಲಿ ಸೀತೆಯನ್ನು ಎಲ್ಲಿಂದು ಹುಡುಕುವುದು ?

ಹನುಮಂತನು ಸೂಕ್ಷ್ಮರೂಪದಿಂದ ಸೀತಾದೇವಿಯನ್ನು ಹುಡುಕುತ್ತಾ ಲಂಕಾನಗರದೊಳಗೆಲ್ಲಾ ತಿರುಗಿದನು. ರಾವಣಾಸುರನ ದೊಡ್ಡ ದೊಡ್ಡ ಅಂತಃಪುರದೊಳಗೆಲ್ಲಾ ಹೊಕ್ಕು ಹುಡುಕುವಾಗ ಮಂಡೋದರಿಯನ್ನು ನೋಡಿ,ಸೀತೆಯೆಂದು ಭ್ರಮಿಸಿ ಮರು ನಿಮಿಷದಲ್ಲಿ ತನ್ನ ತಪ್ಪನ್ನು ಅರಿತುಕೊಂಡನು.

ಅಲ್ಲೆಲ್ಲಿಯೂ ಸೀತೆಯ ಜಾಡು ಕಾಣಲಿಲ್ಲ. ಹಾಗೆಯೇ ಬಿಡದೆ ಹುಡುಕುತ್ತಾ ಅಶೋಕವನಕ್ಕೆ ಹೋದನು. ಅಲ್ಲಿ ಹನುಮಂತನು ಮರದಿಂದ ಮರಕ್ಕೆ ತಿರುಗುತ್ತಾ, ಇರಲು, ಶಾಂತ ಸ್ವರದಲ್ಲಿ ಹೊರಡುವ ರಾಮನಾಮಸ್ಮರಣೆ ಅವನ ಕಿವಿಗೆ ಬಿದ್ದಿತು.

ಚಂದ್ರಶಿಲಾ ನಿರ್ಮಿತವಾದೊಂದು ಮಂಟಪದಲ್ಲಿ ಸೀತೆ ರಾಮನನ್ನೇ ಧ್ಯಾನಿಸುತ್ತಾ, ಕಣ್ಣೀರು ಸುರಿಸಿಕೊಂಡು ಕುಳಿತಿದ್ದಳು. ದೊಡ್ಡ ದೊಡ್ಡ ಭಲ್ಲೆಗಳನ್ನೂ ಕತ್ತಿಗಳನ್ನೂ ಬೇರೆ ಬೇರೆ ಆಯುಧಗಳನ್ನೂ ಧರಿಸಿಕೊಂಡಿದ್ದ ರಾಕ್ಷಸ ಸ್ತ್ರೀಯರು ಆ ಮಂಟಪದ ಸುತ್ತಲೂ ಕಾವಲಾಗಿದ್ದರು.

ಹನುಮಂತನು ಮಂಟಪದ ಪಕ್ಕದಲ್ಲಿದ್ದ ಶಿಂಶುಪಾ ವೃಕ್ಷದಲ್ಲಿ ಎಲೆ ತುಂಬಿದ ಕೊಂಬೆಗಳ ನಡುವೆ ಕುಳಿತು ನೋಡುತ್ತಿದ್ದನು.

ಸೀತೆ ಮಂಟಪದಿಂದ ಎದ್ದು, ಪಕ್ಕದಲ್ಲಿದ್ದ ಅಶೋಕ ವೃಕ್ಷದ ಕೆಳಗೆ ಬಂದು ಕುಳಿತಳು.

ಆಗ ರಾವಣನು ದೊಡ್ಡ ಪಟಾಟೋಪಗಳಿಂದ ಅಶೋಕವನದೊಳಗೆ ಬರುವುದು ಕಂಡಿತು. ಅವನ ಜತೆಯಲ್ಲಿ ದೇವ, ಗಂಧರ್ವ, ನಾಗ, ಯಕ್ಷ, ರಾಕ್ಷಸ, ಮಾನವ ಸುಂದರೀಮಣಿಯರ ಗುಂಪು ಕೂಡಾ ಅವನ ವೈಭವವನ್ನು ಕೀರ್ತಿಸಿಕೊಂಡು ಬರುತ್ತಿದ್ದಿತು.

ರಾವಣನು ಅಶೋಕವೃಕ್ಷದ ಹತ್ತಿರ ಬಂದು, ಸೀತೆಯ ಮುಂದೆ ನಿಂತು. "ಓ ಸೀತಾ! ಈಗಲಾದರೂ ನನ್ನ ಮಾತನ್ನು ಕೇಳು. ಕ್ಷುದ್ರ ಮಾನವನಾದ ರಾಮನನ್ನು ನಂಬಿಕೊಂಡಿರಬೇಡ, ರಾಮನು ಈ ಲಂಕಾನಗರಕ್ಕೆ ಬರುವನೆಂಬುದು ಬರೇ ಸ್ವಪ್ನ ! ಬುದ್ಧಿ ತಂದುಕೋ !" ಎಂದನು.

ಸೀತೆ ಒಂದು ಹುಲ್ಲು ಕಡ್ಡಿಯನ್ನೆತ್ತಿ ತನ್ನ ಮುಂದೆ ಹಾಕಿ, ಅದರೊಂದಿಗೆ ಮಾತಾಡುವಂತೆ, "ಓ ರಾವಣಾ ! ನಿನ್ನ ಪ್ರಗಲ್ಭದ ಮಾತುಗಳಿಗೂ, ಬಲ ದರ್ಪಗಳಿಗೂ ನಾನು ಬಾಗುವೆನೆಂದುಕೊಳ್ಳುವುದೇ ಕೇವಲ ಸ್ವಪ್ನ. ನೀನು ದೊಡ್ಡ ಕಳ್ಳ ! ನಿನ್ನನ್ನು ತಕ್ಕ ಹಾಗೆ ಶಿಕ್ಷಿಸಬೇಕಾದುದು ರಾಜನಾದ ರಾಮನಿಗೆ ಕರ್ತವ್ಯ ಧರ್ಮ. ದಶಕಂಠಗಳನ್ನೂ ಶೋಷಿಸಿ




ಕೊಂಡು ಏನೇನೋ ಗಳಹಬೇಡ. ರಾಮನು ಬಂದು ನಿನ್ನನ್ನು ಹತಮಾಡುವುದಕ್ಕೆ ಮೊದಲೇ ನಿನ್ನ ಆಸೆಗಳನ್ನೆಲ್ಲ ತೀರಿಸಿಕೋ. ಸುಮ್ಮನೆ ನಿನ್ನ ಅಂತಃಪುರಕ್ಕೆ ಹೋಗಿಬಿಡು. ಬೇಗದಲ್ಲೇ ನಿನಗೆ ಅಂತ್ಯ ಕಾಲ ಕಾದಿದೆ !" ಎಂದಳು ತಿರಸ್ಕಾರದಿಂದ.

ಸೀತೆಯ ಮಾತು ಕೇಳಿ ರಾವಣನು ಅಸಹನೆಯಿಂದ ದೊಡ್ಡ ಗಂಡುಗತ್ತಿಯನ್ನೆತ್ತಿ " ನಿನ್ನನ್ನು ಈಗಲೇ ಚೂರು ಚೂರು ಮಾಡಿ ಹಾಕಿಬಿಡುತ್ತೇನೆ !" ಎಂದು ಹೂಂಕರಿಸಿದನು,

" ಹಾಗೆ ಮಾಡಲು ನಿನ್ನಿಂದಾಗದು. ಹೀಗೆ ಹೆದರಿಸಿದರೆ ನಾನು ನಿನಗೆ ವಶಳಾಗುವೆನೆಂದು ನಿನ್ನಷ್ಟಕೆ ನೀನು ಅಂದುಕೊಂಡಿರುವಿ. ರಾಮನ ಹೆಂಡತಿ ರಾವಣನ ಪ್ರತಾಪ ವೈಭವಗಳನ್ನು ನೋಡಿ ಬಾಗಿಹೋಗುವಳೆಂದು ನೀನು ತಿಳಿಯಲು ಕಾರಣ ನಿನ್ನ ಕುರುಡುತನ! ದುರಹಂಕಾರ ! ದುರಾಕಾಂಕ್ಷೆ !" ಎಂದಳು ಸೀತೆ.

" ಹೌದು. ನಮ್ಮ ರಾಕ್ಷಸವನಿತೆಗೆ ನಡೆದ ಪರಾಭವಕ್ಕೆ ಅದೇ ಸರಿಯಾದ ಪ್ರತೀಕಾರ ! ಅದೇ ನನ್ನ ಹಟ !" ಎಂದನು ರಾವಣ.

" ಹಟವಲ್ಲ. ಮೋಸ! ನೀನು ರಾಮನನ್ನು ಇದಿರಿಸಿ ನನ್ನನ್ನು ಎತ್ತಿಕೊಂಡು ಹೋಗಬೇಕಿತ್ತು. ನೀನೊಬ್ಬ ಮಹಾಪುಕ್ಕನು ! ರಣಹೇಡಿ ! ರಾಮನು ನಿನ್ನನ್ನು ಸಂಹರಿಸಲೇ ಬೇಕು. ಸಂಹರಿಸಿ ತೀರುತ್ತಾನೆ! ಇದು ನನ್ನ ಹಟ !" ಎಂದಳು ಸೀತೆ.

ರಾವಣನು ಭಸುಗುಡುತ್ತಾ ಅಲ್ಲಿಂದ ಹೊರಟು ಹೋದನು. ಮಂಡೋದರಿ ಅವನನ್ನು ಸಮಾಧಾನ ಪಡಿಸಿ ರಮಿಸುತ್ತಾ ಕರೆದೊಯ್ದಳು.

ಅನಂತರ ಹನುಮಂತನು ರಾಕ್ಷಸ ಸ್ತ್ರೀಯರು ತೂಕಡಿಸಿ ನಿದ್ರಿಸಿಬೀಳುವ ಸಮಯನೋಡಿ, ಮರದಿಂದಿಳಿದು ಸೀತೆಗೆ ತನ್ನ ಸಂಗತಿಯನ್ನು ಹೇಳಿ, ರಾಮನು ಕೊಟ್ಟಉಂಗುರವನ್ನು ಅವಳಿಗೆ ಕೊಟ್ಟನು. ಆಕಾಶದ ನಕ್ಷತ್ರಗಳೆಲ್ಲ ತನ್ನ ತಲೆಯ ಹುವ್ವುಗಳಾಗುವಂತೆ ಬ್ರಹ್ಮಾಂಡವಾದ ತನ್ನ ವಿಶ್ವರೂಪವನ್ನು ಹನುಮಂತನು ಸೀತೆಗೆ ತೋರಿಸಿದನು. ತನ್ನ ಹೆಗಲ ಮೇಲೆ ಕುಳಿತುಕೊಂಡರೆ ಅವಳನ್ನು ರಾಮನ ಬಳಿಗೆ ಒಯ್ಯುವುದಾಗಿಯೂ ಹೇಳಿದನು.

ಅದಕ್ಕೆ ಸೀತೆ, " ಹನುಮಾ ! ಅದು ಸರಿಯಾದ ಪದ್ಧತಿಯಲ್ಲ, ರಾಮನು ರಾವಣನನ್ನು ಸಂಹಾರ ಮಾಡಿ ನನ್ನನ್ನು ಬಿಡಿಸಿಕೊಂಡು ಹೋಗಬೇಕು. ಅದುವರೆಗೆ ಸೀತೆ ಅಶೋಕವನದಲ್ಲಿ ಶೋಕಿಸಿಕೊಂಡಿರುವಳೆಂದು ನೀನು ರಾಮನೊಂದಿಗೆ ಹೇಳು." ಎಂದು ಹೇಳಿ ಸೀತೆ ತನ್ನ ಸೆರಗಿನಲ್ಲಿ ಕಟ್ಟಿಕೊಂಡಿದ್ದ ಚೂಡಾಮಣಿಯನ್ನು ತೆಗೆದು ರಾಮನಿಗೆ ಕೊಡಲು ಹೇಳಿ ಹನುಮಂತನ ಕೈಗೆ ಕೊಟ್ಟಳು.

ತಾನು ಲಂಕೆಗೆ ಬಂದು ಹೋದ ಸಂಗತಿ ರಾಕ್ಷಸರಿಗೆ ಗೊತ್ತಾಗಬೇಕೆಂದು ಹನುಮಂತನು ಸುಂದರವಾದ ಅಶೋಕವನವನ್ನು ಧ್ವಂಸ ಮಾಡಿದನು. ಆಗ ತನ್ನನ್ನು



ಕೊಲ್ಲಲು ರಾವಣನು ಕಳುಹಿಸಿದ ಜಂಬುಮಾಲಿ, ಅಕ್ಷಕುಮಾರರನ್ನೂ, ಅವರೊಂದಿಗೆ ಬಂದ ಸಾವಿರಾರು ರಾಕ್ಷಸರನ್ನೂ ಕೊಂದು ಹಾಕಿದನು.

ಕಡೆಗೆ ರಾವಣನ ಹಿರಿಯ ಮಗನಾದ ಇಂದ್ರಜಿತ್ತು ಬ್ರಹ್ಮಾಸ್ತ್ರವನ್ನು ಹನುಮಂತನ ಮೇಲೆ ಪ್ರಯೋಗಿಸಿದನು. ಬ್ರಹ್ಮನ ಮೇಲಿನ ಗೌರವದಿಂದ ಹನುಮಂತನು ಕೆಲವು ಕ್ಷಣ ಆ ಅಸ್ತ್ರಕ್ಕೆ ಬದ್ಧನಾಗಿ, ರಾವಣನನ್ನು ನೋಡಿ ನಾಲ್ಕು ಬುದ್ಧಿ ಮಾತು ಹೇಳಬೇಕೆಂದು, ರಾಕ್ಷಸ ಭಟರಿಂದ ಕಟ್ಟಿಸಿಕೊಳ್ಳಲ್ಪಟ್ಟು, ರಾವಣನ ಸಭೆಗೆ ಹೋದನು.

ರಾವಣನು ಎತ್ತರವಾದ ಸಿಂಹಾಸನದ ಮೇಲಿನಿಂದ, ಕೆಳ ಭಾಗದಲ್ಲಿ ಕಬ್ಬಿಣದ ಸಂಕಲೆಗಳಿಂದ ಕಟ್ಟಲ್ಪಟ್ಟು ನಿಂತ ಹನುಮಂತನನ್ನು ಬಾಗಿ ಪರಿಹಾಸವಾಗಿ ನೋಡಿದನು.

ಕೂಡಲೇ ಹನುಮಂತನು ಶರೀರವನ್ನು ಬೆಳೆಸಿ ಸಂಕಲೆಗಳನ್ನು ಕಡಿದುಕೊಂಡು, ರಾವಣನ ತಲೆ ಮೆಟ್ಟುವಷ್ಟು ಎತ್ತರದವರೆಗೆ ತನ್ನ ಬಾಲವನ್ನು ಸುರುಳಿಯಾಗಿ ಸುತ್ತಿಕೊಂಡು ಅದರ ಮೇಲೆ ಕುಳಿತುಕೊಂಡನು.

ಕೋಪದಿಂದ ನೋಡುವ ರಾವಣನನ್ನು ನೋಡಿ ಹನುಮಂತನು, "ಎಲವೋ ರಾಕ್ಷಸರಾಜ ರಾವಣಾ! ನಾನು ರಾಮನ ದೂತನು. ರಾಮನು ಕೋತಿಗಳನ್ನೇ ಮಹಾವೀರರಂತೆ ನಡೆಯಿಸಿ ನಿನ್ನ ಈ ಲಂಕೆಯನ್ನು ಮುತ್ತಿಗೆ ಹಾಕಬಲ್ಲ ಸಮರ್ಥನಾದ ಮಾನವ ಶ್ರೇಷ್ಠನೆಂದು ತಿಳಿ! ದೊಡ್ಡ ಬಲ ನಿನಗಿರುವುದೆಂದು ಗರ್ವಿಸಿ ಬೀಗಬೇಡ. ಬಲಿಷ್ಠವಾದ ಸರ್ಪವು ಸಣ್ಣೆರುವೆಗಳಿಂದ ಹೇಗೆ ಸಾಯುವುದೋ ನಿನಗೆ ಗೊತ್ತಿಲ್ಲದ ಸಂಗತಿಯಲ್ಲ, ಸೀತೆಯನ್ನು ರಾಮನಿಗೆ ಒಪ್ಪಿಸಿ, ಕ್ಷಮಿಸಬೇಕೆಂದು ಬೇಡಿಕೋ" ಎಂದು ಹೇಳಿದನು,

ಅದನ್ನು ಕೇಳಿ ರಾವಣನು ಮಹಾಕೋಪದಿಂದ ಕಣ್ಣುಗಳಿಂದ ಕಿಂಗಿಡಿ ಉದುರಿಸುತ್ತ ಕತ್ತಿಯನ್ನು ಎತ್ತಿದನು. ಆಗ ವಿಭೀಷಣನು ರಾವಣನನ್ನು ನೋಡಿ, "ದೂತನನ್ನು ಕೊಲ್ಲುವುದು ಧರ್ಮವಲ್ಲ. ಪೌರುಷವೂ ಅಲ್ಲ" ಎಂದು ಎಚ್ಚರಿಸಿದನು.

"ಹಾಗಾದರೆ ಈ ವಾನರನಿಗೆ ಈ ಬಾಲದ ಗರ್ವ ಅಳಿದು ಹೋಗುವ ಹಾಗೆ ಬಾಲಕ್ಕೆ ಬಟ್ಟೆ ಸುತ್ತಿ ಎಣ್ಣೆ ಸುರಿದು ಬೆಂಕಿ ಹಚ್ಚಿಸುಟ್ಟು ಹಾಕಿ ಬಿಡಿರಿ" ಎಂದು ಆಜ್ಞೆ ಮಾಡಿದನು ರಾವಣ.

ರಾಕ್ಷಸ ಭಟರು ಹನುಮಂತನ ಬಾಲಕ್ಕೆ ಬಟ್ಟೆಗಳನ್ನು ಸುತ್ತುತ್ತಿದ್ದಂತೆ ಬಾಲವು ಬೆಳೆದುಕೊಂಡೇ ಹೋಯಿತು. ಎಷ್ಟು ಎಣ್ಣೆ ಸುರಿದರೂ ಸಾಲದಾಯಿತು. ಅಂತೂ ಬೆಂಕಿ ಹಚ್ಚಿದರು, ಹನುಮಂತನು ಶರೀರವನ್ನು ಬೆಳೆಸಿ ಸಿಂಹನಾದ ಮಾಡಿ ಚಂಗನೆ ಹಾರಿದನು.

ಉರಿಯುವ ಬಾಲವನ್ನು ದೊಂದಿಯ ಹಾಗೆ ಗಿರಿಗಿರಿ ತಿರುಗಿಸುತ್ತ, ಸೌಧಗಳ ಮೇಲಿನಿಂದ ಸೌಧಕ್ಕೆ ಹಾರುತ್ತ, ಹನುಮಂತನು ಲಂಕಾಪಟ್ಟಣ

ವನ್ನೆಲ್ಲಾ ಅಗ್ನಿಗೆ ಆಹುತಿ ಮಾಡಿದನು. ಅವನಿಗೆ ಅಗ್ನಿ ತಣ್ಣಗೆ ಸ್ಪರ್ಶವಾಗುತ್ತಿತ್ತು. ಬಹು ದಾರುಣ ವಾಗಿ • ಲಂಕಾದಹನವಾಯಿತು. ರಾವಣನ ಅಂತಃ ಪುರದ ಸೌಧಗಳೆಲ್ಲಾ ಸುಟ್ಟು ಕರಕಾಗಿ ಹೋದುವು. ಅನೇಕಮಂದಿ ರಾಕ್ಷಸರು ಸತ್ತರೂ. ವಿಭೀಷಣನ ಭವನವನ್ನು ಮಾತ್ರ ಹನುಮಂತನು ಸುಡದೆ ಬಿಟ್ಟಿದ್ದನು.

ಹನುಮಂತನು ಅಶೋಕವನಕ್ಕೆ ಹೋಗಿ ಸೀತೆ ಕ್ಷೇಮವಾಗಿರುವುದನ್ನು ನೋಡಿ, ಅಲ್ಲಿಂದ ಸಮುದ್ರದ ಬದಿಗೆ ಹಾರಿ ಹೋಗಿ ಬಾಲವನ್ನು ಸಮುದ್ರದಲ್ಲಿ ಮುಳುಗಿಸಿ, ಬೆಂಕಿಯನ್ನು ಆರಿಸಿಕೊಂಡು, ಸೀತೆಯ ಚೂಡಾಮಣಿಯೊಂದಿಗೆ ಸಮುದ್ರವನ್ನು ದಾಟಿದನು. ಅಲ್ಲಿ ಅವನನ್ನು ನಿರೀಕ್ಷಿಸಿಕೊಂಡಿದ್ದ ವಾನರರೊಂದಿಗೆ ರಾಮನ ಬಳಿಗೆ ಹೋಗಿ ಚೂಡಾಮಣಿಯನ್ನು ರಾಮನಿಗೆ ಕೊಟ್ಟನು.

ರಾಮನು ಚೂಡಾಮಣಿಯನ್ನು ನೋಡಿ, ಸೀತೆ ಯನ್ನು ನೋಡಿದ ಹಾಗೆ ಅದನ್ನು ತನ್ನೆದೆಗೆ ಒತ್ತಿ ಕೊಂಡನು. ಹನುಮಂತನು ಸೀತೆಯ ಸಮಾಚಾರ ವನ್ನೆಲ್ಲಾ ರಾಮನೊಂದಿಗೆ ಹೇಳಿದನು.

ರಾಮನು ಹನುಮಂತನನ್ನು ಆಲಿಂಗನ ಮಾಡಿ ಕೊಂಡು, "ಹನುಮಾ, ನೋಡಿ ಬಾರೆಂದರೆ ಸುಮ್ಮನೆ ಬಾರದೆ ಸುಟ್ಟು ಹಾಕಿ ಬಂದಿರುವಿ! ನಿನ್ನಂಥವನ ಸಹಾಯವಿರುವಾಗ, ನಾನು ಸಾಧಿಸಲಾಗದ ಕಾರ್ಯ ಯಾವುದಿದ್ದೀತು! ಸೀತೆಗೂ ನನಗೂ ಸಂಧಾನಕರ್ತ ನಾಗಿ ಆನಂದದಾಯಕನಾಗಿರುವಿ! ಬುದ್ಧಿವಂತನಪ್ಪಾ ನೀನು, ಒಳ್ಳೆಯ ಕೀರ್ತಿಶಾಲಿ ನೀನು!" ಎಂದನು.

ರಾಮನು ಕೋದಂಡವನ್ನು ಎತ್ತಿ ಹಿಡಿದು, ಸೀತೆ ಹೇಳಿದಂತೆ ರಾವಣ ಸಂಹಾರಕ್ಕೆ ದೀಕ್ಷಾ ಕಂಕಣ ಬದ್ಧನಾದನು.

ವಿಭೀಷಣನು ರಾವಣನ ಸವತಿ ತಮ್ಮನು. ರಾಮ ನೊಂದಿಗೆ ವೈರ ಕಟ್ಟಿಕೊಳ್ಳಬೇಡವೆಂದೂ, ಸೀತೆಯನ್ನು ಗೌರವದಿಂದ ಕರೆದೊಯ್ದು ರಾಮನಿಗೆ ಒಪ್ಪಿಸ ಬೇಕೆಂದೂ ವಿಭೀಷಣನು ರಾವಣನಿಗೆ ಬುದ್ಧಿ ಹೇಳಿದನು.

"ನಿನ್ನೊಬ್ಬನ ಹಟದಿಂದ ರಾಕ್ಷಸ ಕುಲಕ್ಕೆ ಮುಪ್ಪು ತರುವುದು ಅನ್ಯಾಯ!" ಎಂದು ವಿಭೀಷಣನು ಹೇಳಿದುದಕ್ಕೆ ರಾವಣನು ಕ್ರುದ್ಧನಾಗಿ "ಎಲೋ ಹೇಡಿಯೇ! ನೀನು ರಾಕ್ಷಸಕುಲದಲ್ಲಿ ತಪ್ಪಿ ಹುಟ್ಟಿ ದವನು! ಶೂರ್ಪಣಖೆಗಾದ ಪರಾಭವವು ರಾಕ್ಷಸ ಕುಲಕ್ಕೇ ಆದ ಪರಾಭವ! ನೀನೊಬ್ಬ ಕುಲದ್ರೋಹಿ! ಈಗಲೇ ಲಂಕೆಯನ್ನು ಬಿಟ್ಟು ಹೋಗು! ಮತ್ತೆ ಕಾಣಿಸಿದರೆ ಚಿತ್ರವಧೆ ಮಾಡಿಸಿಬಿಡುತ್ತೇನೆ, ನಡೆ!" ಎಂದನು ಕ್ರೂರನಾಗಿ.

ವಿಭೀಷಣನು ತನ್ನ ಅನುಚರರೊಂದಿಗೆ ಲಂಕೆ ಯನ್ನು ಬಿಟ್ಟು ಹೊರಟನು.





# ತ್ಯಾಗಫಲಿತ

ಇರಾಕ್ ದೇಶದೊಳಗಿನ ಒಂದಾನೊಂದು ಪ್ರಾಂತ್ಯದಲ್ಲಿ ಚಿಕ್ಕದೊಂದು ರಾಜ್ಯವಿದ್ದಿತು. ಆ ರಾಜ್ಯವನ್ನು ಯುವಕನಾದ ರಾಜನೊಬ್ಬನು ಪಾಲಿಸಿಕೊಂಡಿದ್ದನು. ಒಂದು ದಿನ ಅವನಿಗೆ ಭಿಕ್ಷುಕರ ವಿಷಯದಲ್ಲಿ ಅಸಹ್ಯ ಹುಟ್ಟಿ, ತನ್ನ ರಾಜ್ಯದಲ್ಲಿ ಭಿಕ್ಷುಕರೇ ಇಲ್ಲದಂತೆ ಮಾಡಬೇಕೆಂದು ಆಲೋಚನೆ ಬಂತು.

ಕೂಡಲೇ ರಾಜನು ಭಿಕ್ಷುಕ ಪ್ರಕ್ಷಾಳನಾ ಶಾಸನವನ್ನು ರಾಜ್ಯದೊಳಗೆ ಅಮಲುಪಡಿಸಿದನು. ರಾಜ್ಯದ ಎಲ್ಲಾ ಊರುಗಳಿಗೂ ಉದ್ಯೋಗಸ್ಥರನ್ನು ಕಳುಹಿಸಿದನು. ಅವರು ಕೆಲಸ ಮಾಡಲು ತ್ರಾಣ ಉಳ್ಳವರೆಲ್ಲರಿಗೂ ಕೆಲಸ ಕೊಡಿಸಿದರು. ಮುದಿತನದಿಂದಲೂ, ಅಂಗವೈಕಲ್ಯತೆಗಳಿಂದಲೂ ಕೆಲಸ ಮಾಡಲಾಗದವರಿಗೆ ಭೋಜನ ಸೌಕರ್ಯಗಳನ್ನು ಏರ್ಪಡಿಸಿದರು.

ರಾಜನು ಇಷ್ಟು ಒಳ್ಳೆಯ ಏರ್ಪಾಡುಗಳನ್ನು ಮಾಡಿದರೂ ಕೆಲವರು ಭೋಜನ ಛತ್ರಗಳಿಂದ ತಪ್ಪಿಸಿಕೊಂಡು ಹೋಗಿ ಭಿಕ್ಷೆ ಎತ್ತಲು ಪ್ರಾರಂಭಿಸಿದರು. ಇದನ್ನು ನೋಡಿ ರಾಜನಿಗೆ ಬಹಳ ಕೋಪ ಬಂದಿತು. ಅವನು ತನ್ನ ರಾಜ್ಯದಲ್ಲಿ ಯಾರಾದರೂ ಭಿಕ್ಷುಕರಿಗೆ ಭಿಕ್ಷೆ ನೀಡಿದ ಪಕ್ಷದಲ್ಲಿ ಹಾಗೆ ಭಿಕ್ಷೆ ಹಾಕಿದವರ ಒಂದು ಕೈಯನ್ನು ಕಡಿದು ಹಾಕಲ್ಪಡುವುದೆಂದು ಊರೂರುಗಳಲ್ಲಿ ಡಂಗುರ ಸಾರಿಸಿದನು.

ಒಂದು ದಿನ ರಾಜನ ತಂಗಿ ತನ್ನ ಸೋದರ ಮಾವನನ್ನು ನೋಡಲು ಹೋದಳು. ಅಲ್ಲಿಂದ ರಾಜಭವನಕ್ಕೆ ತನ್ನ ಇಬ್ಬರು ದಾಸಿಯರೊಂದಿಗೆ ಹಿಂದಿರುಗಿ ಬರುತ್ತಿದ್ದಳು. ದಾರಿಯಲ್ಲಿ ಅವರಿಗೊಂದು ಉದ್ಯಾನವನವು ಕಂಡಿತು. ಮೂವರೂ ಆ ಉದ್ಯಾನದ ಮರಗಳ ನೆರಳಿನಲ್ಲಿ ವಿಶ್ರಮಿಸಲು ಹೋದರು. ಅದು ಭೋಜನದ ವೇಳೆಯಾದುದರಿಂದ ರಾಜನ ತಂಗಿ ತನ್ನ ದಾಸಿಯರಿಗೆ ಎರಡೆರಡು ರೊಟ್ಟಿಗಳನ್ನು ಕೊಟ್ಟಳು,

ದಾಸಿಯರಲ್ಲಿ ಒಬ್ಬಳು ಉದ್ಯಾನದಲ್ಲಿ ನೀರನ್ನು ಹುಡುಕುತ್ತ ಹೋದಳು. ಒಂದು ಕೆರೆಯುಬದಿಯ ಮರದ ಕೆಳಗೆ ಒಬ್ಬ ಮುದುಕ ಬಿದ್ದಿರುವುದನ್ನು ನೋಡಿದಳು, ಅವನು ತುಂಬಾ ಬಲಹೀನನಾಗಿ ಏಳಲಾಗದವನಂತಿದ್ದನು.

ಆ ದಾಸಿ ಅವನ ಬಳಿಗೆ ಹೋಗಿ, "ಏನಾಗಿದೆ ನಿನಗೆ? ಏಕೆ ಹೀಗೆ ಬಿದ್ದಿರುವಿ ?" ಎಂದು ಕೇಳಿದಳು.

ಅರೇಬಿಯಾ ಕಥೆ



ಮಾತಾಡಲಿಕ್ಕೂ ಶಕ್ತಿ ಇಲ್ಲದ ಮುದುಕ ಕಷ್ಟ ಪಟ್ಟು ಮಾತಾಡುತ್ತಾ, "ಅಮ್ಮಾ, ಪುಣ್ಯಸ್ಥಳಗಳಿಗೆ ನಾನೊಬ್ಬ ಯಾತ್ರೆ ಮಾಡುವವನು. ಕಳ್ಳರು ನನ್ನ ಹತ್ತಿರವಿದ್ದುದನ್ನೆಲ್ಲಾ ದೋಚಿಕೊಂಡು ಹೋದರು. ಆಮೇಲೆ ಆರೋಗ್ಯ ಕೆಟ್ಟು ಜ್ವರ ಬೇರೆ ಬಂದಿತು. ಈಗ ಆರೋಗ್ಯ ಸರಿಯಾಯಿತು. ಆದರೆ ತಿನ್ನಲು ಏನೂ ಸಿಗದೆ, ಹಸಿವೆಯಿಂದ ಪ್ರಾಣ ಹೋಗುವ ಸ್ಥಿತಿ ಬಂದಿದೆ. ಅಬ್ಬಬ್ಬಾ!" ಎಂದನು.

ದಾಸಿಗೆ ಆ ಮುದುಕನ ಮೇಲೆ ಮನಸ್ಸು ಕರಗಿ ಹೋಯಿತು. ಅವಳು ತನ್ನ ಹತ್ತಿರವಿದ್ದ ಎರಡು ರೊಟ್ಟಿಗಳನ್ನೂ ಆವನ ಕಡೆಗೆ ನೀಡಿದಳು.

ಆಗ ಅವಳ ಹಿಂದೆಯೇ ಬರುತ್ತಿದ್ದ ರಾಜನ ತಂಗಿ "ಕೊಡಬೇಡವೇ!" ಎಂದು ಕೂಗಿದಳು.

ದಾಸಿ ಹೆದರಿ ಹಿಂದಿರುಗಿ ನೋಡಿದಳು. ರಾಜನ ತಂಗಿ ಓಡೋಡಿ ಬಂದು, "ಏನೇ ಇದು ನಿನ್ನ ಹೆಮ್ಮೆ? ಎಲ್ಲಿದೆ ನಿನ್ನ ಜ್ಞಾನ? ಯಾರಿಗೂ ಭಿಕ್ಷೆ ಕೊಡಕೂಡದೆಂಬ ಕಠಿಣವಾದ ರಾಜಾಜ್ಞೆ ನಿನಗೆ ಗೊತ್ತಿಲ್ಲವೇನು?" ಎಂದಳು ಕೋಪದಿಂದ.

"ನನಗೆ ರಾಜಾಜ್ಞೆ ಗೊತ್ತಿಲ್ಲದೆ ಏನೂ ಇಲ್ಲ. ಅವರು ರಾಜ್ಯದಲ್ಲಿ ಭಿಕ್ಷುಕರೇ ಇಲ್ಲದಂತೆ ಮಾಡಬೇಕೆಂದಿರುವುದು ಒಳ್ಳೆಯದೇ. ಆ ಭಿಕ್ಷುಕ ಮಂದಿಯಲ್ಲಿ ಅನೇಕರು ಕಳ್ಳರೂ, ಸೋಮಾರಿಗಳೂ ಇದ್ದಾರೆ ನಿಜ. ಆದರೆ ಈ ಮುದುಕ ಅಂತಹ ಭಿಕ್ಷುಕನೋ ಸೋಮಾರಿಯೋ ಅಲ್ಲ. ಪುಣ್ಯಸ್ಥಳಗಳಿಗೆ ಯಾತ್ರೆ ಹೊರಟಿದ್ದಾನೆ. ಕಳ್ಳರ ಕಾರಣದಿಂದ ಎಲ್ಲವನ್ನೂ ಕಳೆದುಕೊಂಡಿದ್ದಾನೆ. ನಡೆಯಲಿಕ್ಕೂ ಕೂಡದ ಸ್ಥಿತಿಯಲ್ಲಿದ್ದಾನೆ. ಹಸಿವೆಯಿಂದ ಸಾಯುವ ಹಾಗಿದ್ದಾನೆ. ನನ್ನನ್ನು ತಡೆಯಬೇಡಿ" ಎಂದು ಆ ದಾಸಿ ಮುದುಕನಿಗೆ ರೊಟ್ಟಿಗಳನ್ನು ಕೊಟ್ಟಳು. ನೀರೂ ಕುಡಿಸಿದಳು.

"ಏನೇನೋ ಕುಂಟು ನೆವನದಿಂದ ರಾಜಾಜ್ಞೆಯನ್ನೂ, ನನ್ನ ಆಜ್ಞೆಯನ್ನೂ ಧಿಕ್ಕರಿಸುವಿಯೇನು? ನಿನಗೆ ತಕ್ಕ ಶಾಸ್ತಿ ಮಾಡಿಸುತ್ತೇನೆ" ಎಂದು ರೋಷಗೊಂಡ ರಾಜನ ತಂಗಿ ರಾಜಭವನಕ್ಕೆ ಹೋದ ಕೂಡಲೇ, ತನ್ನ ದಾಸಿ ಯಾವನೋ ಭಿಕ್ಷುಕನಿಗೆ ರೊಟ್ಟಿಗಳನ್ನು ಧರ್ಮ ಮಾಡಿದಳೆಂದು ರಾಜನೊಂದಿಗೆ ಹೇಳಿದಳು.

"ಹಾಗೇನು! ಹಾಗಾದರೆ ಅವಳ ಕೈಯನ್ನು ಖಂಡಿಸದೆ ತಪ್ಪದು" ಎಂದು ರಾಜನು ಆ ದಾಸಿಯನ್ನು ಭಟರ ವಶಕ್ಕೆ ಕೊಡಿಸಿದನು. ಅವರು ಅವಳನ್ನು ಕರೆದೊಯ್ದು ಅದಳ ಒಂದು ಕೈಯನ್ನು ಕಡಿದು ಹಾಕಿದರು.

ಭಟರು ಆ ದಾಸಿಯನ್ನು ಕರೆದುಕೊಂಡು ಹೋದ ಸಮಯದಲ್ಲಿ ರಾಜನು ಅವಳ ಮುಖವನ್ನು ನೋಡಿದನು. ಆ ಸೌಂದರ್ಯವೂ, ನಿರ್ಭಯತ್ವವೂ, ಪ್ರಶಾಂತತೆಯೂ ಆತನನ್ನು ಆಕರ್ಷಿಸಿದುವು. ಆದರೆ ಅವಳನ್ನು ಸುಮ್ಮನೆ ಬಿಟ್ಟರೆ ಹತ್ತುಮಂದಿ ತಾನು ಪಕ್ಷಪಾತ

ತೋರಿಸಿದೆನೆಂದುಕೊಳ್ಳುವರೆಂಬ ಭಯದಿಂದ ತನ್ನ ಆಜ್ಞೆಯನ್ನು ಹಿಂದೆಗೆದುಕೊಳ್ಳಲಾಗದೆ ಹೋದನು. ಅವನಿಗೆ ಪಶ್ಚಾತ್ತಾಪದಿಂದ ನಿದ್ದೆಯೇ ಬರಲಿಲ್ಲ.

ಮರುದಿನ ರಾಜನು ತನ್ನ ಅಂತರಂಗಿಕರ ಮೂಲಕ ಆ ದಾಸಿಯನ್ನು ಕುರಿತು ಎಲ್ಲಾ ವಿವರಗಳನ್ನೂ ತಿಳಿದನು. ಎಲ್ಲರೂ ಆವಳ ಅಂದಚಂದಗಳನ್ನಷ್ಟೇ ಅಲ್ಲದೆ, ಅವಳು ಎಂತಹ ದಯಾಗುಣಿಯೋ, ದಾನಶೀಲೆಯೋ, ಉತ್ತಮಿಯೋ ಎಂದು ಹೇಳುವ ಸಂಗತಿಯೂ ರಾಜನಿಗೆ ತಿಳಿಯಿತು. ಅಂತಹ ಉತ್ತಮಳಿಗೆ ತನ್ನಿಂದ ಇಂತಹ ಗತಿ ಬಂದುದನ್ನು ನೆನೆದು ರಾಜನು ತಳಮಳಿಸಿದನು. ಇನ್ನೂ ವಿವಾಹವಾಗದ ಆ ರಾಜನು ಒಂದು ವಾರ ತಿರುಗುವುದರೊಳಗೆ, ಆ ಮೊಂಡುಗೈಯ ದಾಸಿಯನ್ನು ವಿವಾಹ ಮಾಡಿಕೊಂಡನು.

ಈ ವಿವಾಹವು ರಾಜನ ತಂಗಿಗೆ ಬಹಳ ಕೋಪಕ್ಕೆ ಕಾರಣವಾಯಿತು.

ರಾಣಿಯಾದ ಮೇಲೆ ಕೂಡಾ ಆ ದಾಸಿ ರಾಜನ ತಂಗಿಯ ಮೇಲೆ ಹಗೆ ಸಾಧಿಸುವ ಆಲೋಚನೆ ಮಾಡಲೇ ಇಲ್ಲ. ಅವಳ ಮೇಲೆ ನಿಜವಾದ ಗೌರವಾದರಗಳನ್ನೇ ತೋರಿಸಿಕೊಂಡಿದ್ದಳು, ಸ್ವಲ್ಪ ಕಾಲದಲ್ಲಿ ಕಳೆದು ಅವಳು ಗರ್ಭಿಣಿಯಾಗಿ ಒಬ್ಬ ಕುಮಾರನನ್ನು ಹೆತ್ತಳು. ಇದು ರಾಜನ ತಂಗಿಗೆ ರಾಣಿಯ ಮೇಲಿನ ದ್ವೇಷಕ್ಕೆ ಇನ್ನಷ್ಟು ಸಹಾಯಕವಾಯಿತು.

ಒಂದು ಸಾರಿ ರಾಜನು ಏನೋ ಕೆಲಸದ ಮೇಲೆ ಕೆಲವು ತಿಂಗಳವರೆಗೆ ನಗರದಲ್ಲಿಲ್ಲದೆ ಹೋಗುವಂತಾಯಿತು. ಇದನ್ನು ಅನುಕೂಲ ಕಾಲವಾಗಿ ಮಾಡಿಕೊಂಡು ರಾಜನ ತಂಗಿ, ತನ್ನ ವಿಶ್ವಾಸದ ದುಷ್ಟ ದಾಸಿಯರ ಸಹಾಯದಿಂದ, ರಾಣಿ ಒಬ್ಬಳು ಮಂತ್ರವಾದಿನಿಯೆಂದು ಪುಕಾರು ಹುಟ್ಟಿಸಿದಳು. ಅವಳು ಮಂತ್ರಗಾತಿಯಾಗಿಲ್ಲದಿದ್ದರೆ, ಮೊಂಡುಗೈಯ ದಾಸಿಯೊಬ್ಬಳನ್ನು ರಾಜನು ಹೇಗೆ ಮದುವೆ ಮಾಡಿ



ಕೊಳ್ಳಲು ಸಾಧ್ಯ ? ಹೀಗೆ ಅವರು ಹತ್ತಾರು ಮಂದಿಯೊಂದಿಗೆ ಗುಸುಗಾಡಿದರು.

ರಾಜನ ವೃದ್ಧ ತಾಯಿಗೆ ಮಂತ್ರವಾದಿನಿಗಳೆಂದರೆ ಕೆಟ್ಟ ಭಯವಿದ್ದಿತು. ಅದರ ಮೇಲೆ ರಾಜನು ಮದುವೆಯಾದಂದಿನಿಂದಲೂ ಮೊಂಡುಗೈಯ ಹುಡುಗಿ ತನ್ನ ಸೊಸೆಯಾಗಿ ಬಂದುದರಿಂದ ಆಕೆಗೆ ಅವಮಾನವೆನಿಸಿಕೊಂಡಿತ್ತು. ಈ ಕಾರಣಗಳಿಂದ ರಾಜಮಾತೆ, ಸೊಸೆ ಮಂತ್ರಗಾತಿ ಎಂಬ ಪುಕಾರನ್ನು ಬೇರೆ ಕೇಳಿ, ನಂಬಿದಳು. ಕೂಡಲೇ ಕಾವಲಿನವರನ್ನು ಕರೆದು ತನ್ನ ಮೊಂಡುಗೈಯ ಸೊಸೆಯನ್ನು ಮಗುವಿನೊಂದಿಗೆ ಒಯ್ದು ಮರುಭೂಮಿಯಲ್ಲೆಲ್ಲಿಯಾದರೂ ಬಿಟ್ಟು ಬರುವಂತೆ ಹೇಳಿಬಿಟ್ಟಳು. ಕಾವಲಿನವರು ರಾಣಿಯನ್ನೂ ಅವಳ ಮಗನನ್ನೂ ಎತ್ತಿಕೊಂಡು ಹೋಗಿ ಮರುಭೂಮಿಯಲ್ಲಿ ಬಿಟ್ಟು ಬಂದರು.

ಆಗ ಮಧ್ಯಾಹ್ನದ ಹೊತ್ತು. ಬಾಯಾರಿಕೆಯಾದುದರಿಂದ ರಾಣಿ ತನ್ನ ಮಗುವನ್ನು ಕಂಕುಳಲ್ಲಿ

ಎತ್ತಿಕೊಂಡು ಮರುಭೂಮಿಯಲ್ಲಿ ಸ್ವಲ್ಪ ಹೊತ್ತು ತಿರುಗಾಡಿದಳು. ಅವಳ ಕಣ್ಣಿಗೆ ಚಿಕ್ಕದೊಂದು ನದಿ ಕಂಡಿತು. ಬಾಯಾರಿಕೆ ತೀರಿಸಿಕೊಳ್ಳಲು ಅವಳು ಆ ನದಿಯ ಬದಿಗೆ ಹೋಗಿ, ಒಂದು ಕೈಯಲ್ಲಿ ಮಗನನ್ನು ಹಿಡಿದುಕೊಂಡು, ಎರಡನೇ ಕೈ ಇಲ್ಲದ ಕಾರಣದಿಂದ ಬಾಯಿಯಿಂದಲೇ ನೀರನ್ನು ಕುಡಿಯಲು ಮುಂದಕ್ಕೆ ಬಾಗಿದಳು.

ಆ ಸಮಯದಲ್ಲಿ ಅವಳ ಮಗು ಕೈಯಿಂದ ಜಾರಿ ಥಕ್ಕನೆ ನದಿಯೊಳಗೆ ಬಿದ್ದು ಪ್ರವಾಹದ ವೇಗದಲ್ಲಿ ಹೋಗಿ ಬಿಟ್ಟಿತು. ಅದನ್ನು ನೋಡಿ ರಾಣಿಗೆ ದುಃಖವನ್ನು ತಾಳಲಾಗಲಿಲ್ಲ. ಅವಳು ದೊಡ್ಡ ದನಿಯಿಂದ ಶೋಕಿಸುತ್ತ ಕುಸಿ ಕುಳಿತಳು.

ಸ್ವಲ್ಪ ಹೊತ್ತಿಗೆ ಕತ್ತಲೆಯಾಗಿ, ಆಕಾಶದಲ್ಲಿ ಚಂದ್ರೋದಯವಾಯಿತು. ರಾಣಿ ದುಃಖಾ ವೇಗದಲ್ಲಿ ಏನೂ ಕೂಡದೆ ತಂದ್ರಾವಸ್ಥೆಯಲ್ಲಿರುವಾಗ. ಯಾರೋ ಮೃದುವಾದ ಕಂಠಸ್ವರದಿಂದ, "ರಾಣೀ, ನಿನಗೆ ಕೈ ಜಾರಿ ಹೋದ ಮಗನು ಬೇಕೆಂದಿದೆಯೆ?" ಎಂದು ಕೇಳಿದರು.

"ಬೇಕು, ಬೇಕೇ ಬೇಕು!" ಎಂದಳು ರಾಣಿ ಕಣ್ಣು ತೆರೆದು ಕೈ ಚಾಚುತ್ತ. ಬೆಳುದಿಂಗಳ ಬೆಳಕಿನಲ್ಲಿ ಕಂಡೂ ಕಾಣಲಾಗದಂತಹ ಒಂದು ಚಿಕ್ಕ ಆಕಾರವು ರಾಣಿಗೆ ಮಗುವನ್ನು ಒಪ್ಪಿಸಿತು.

ಒಂದೆರಡು ಕ್ಷಣಗಳಲ್ಲಿ ಮತ್ತೊಂದು ಮೃದುವಾದ ಕಂಠಸ್ವರವು, "ರಾಣೀ, ನೀನು ಕಳೆದುಕೊಂಡ ಕೈ ಮತ್ತೆ ಬೇಕೆಂದು ಕೇಳುವಿಯಾ?" ಎಂದಿತು.

"ಬೇಕೇ ಬೇಕು. ಅದೂ ಇದ್ದರೆ ಮಗುವನ್ನು ಕಳೆದುಕೊಳ್ಳುತ್ತಿದ್ದೇನೆ?" ಎಂದಳು ರಾಣಿ ದೀನಳಾಗಿ.

ಮರುಕ್ಷಣದಲ್ಲಿ ಅವಳ ಮೊಂಡು ಗೈ ಸರ್ರನೆ ಮೊಳೆತು ಯಥಾ ಪ್ರಕಾರವಾಯಿತು. ಆ ಎರಡು ಆಕಾರಗಳೂ ಅವಳನ್ನು ಆಶೀರ್ವದಿಸಿ, "ನೀನು ಇಲ್ಲೇ ಇರು. ನಿನ್ನ ಗಂಡ ಮಹಾರಾಜ ಈ ದಾರಿಯಾಗಿಯೇ ನಗರಕ್ಕೆ ಹಿಂದಿರುಗುತ್ತಾನೆ. ನಿನ್ನನ್ನು ನೋಡಿ ಅವನು ಅತ್ಯಾನಂದ ಪಡುತ್ತಾನೆ" ಎಂದುವು.

ರಾಣಿ ಅತ್ಯಾಶ್ಚರ್ಯದಿಂದ, "ನನಗೆ ಇಷ್ಟು ದೊಡ್ಡ ಒಳ್ಳೆಯದನ್ನು ಮಾಡಿದ ನೀವಿಬ್ಬರೂ ಯಾರೋ? ಏನೆಂದು ಪೂಜಿಸಲಿ?" ಎಂದು ರಾಣಿ ಕೇಳಿದಳು.

"ಅಮ್ಮಾ, ನೀನು ಮಾಡಿದ ತ್ಯಾಗದ ಫಲಗಳೇ ನಿನಗಿಷ್ಟು ಮೇಲು ಮಾಡಿದುವು. ಆ ದಿನ ಮರಣದ ಬಾಗಿಲಲ್ಲಿದ್ದ ಮುದಕ ಯಾತ್ರಿಕನಿಗೆ ಎರಡು ರೊಟ್ಟಿಗಳನ್ನು ಕೊಟ್ಟು ಅವನ ಪ್ರಾಣ ಕಾಪಾಡಿರುವಿ. ನಾವೇ ಆ ಎರಡು ರೊಟ್ಟಿಗಳು!" ಎಂದು ಹೇಳಿ ಆಕಾರಗಳೆರಡೂ ಚಂದ್ರಕಾಂತಿಯಲ್ಲಿ ಬೆರೆತು ಹೋದುವು.



# ಆಜ್ಞೆಯ ಬದಲಾವಣೆ

ಲಕ್ಷಣ ದೇಶದ ಪ್ರಧಾನ ನಗರಗಳಲ್ಲಿ ಒಂದಾದ ಲಾವಣ್ಯಪುರದಲ್ಲಿ ಕತ್ತಲೆಯಾದ ಮೇಲೆ ಹಾದಿ ಬಡಕರಾದ ದುಷ್ಟರೂ, ಕೊಳ್ಳೆಗಾರರೂ ನಗರದ ಬೀದಿಗಳಲ್ಲಿ ತಿರುಗುವ ಪ್ರಜೆಗಳನ್ನು ಅಟಕಾಯಿಸಿ ದೋಚಿಕೊಳ್ಳ ತೊಡಗಿದರು. ಇದರಿಂದ ಜನರು ಕತ್ತಲೆಯಾದ ಮೇಲೆ ನಗರದ ಬೀದಿಗಳಲ್ಲಿ ಸ್ವೇಚ್ಛೆಯಾಗಿ ತಿರುಗಲಾಗದಂತಹ ಪರಿಸ್ಥಿತಿಯುಂಟಾಯಿತು. ನಗರ ವಾಸಿಗಳು ಈ ವಿಷಯವನ್ನು ನಗರ ಪಾಲಕನಾದ ವಿರೂಪಾಕ್ಷನ ಗಮನಕ್ಕೆ ತಂದರು. ಮರುದಿನವೇ ಅವನು ಕತ್ತಲೆಯಾದ ಮೇಲೆ ನಗರ ಬೀದಿಗಳಲ್ಲಿ ಪ್ರಜೆಗಳಾರೂ ತಿರುಗಕೂಡದೆಂದು ಆಜ್ಞೆಯನ್ನು ಅಮಲಿಗೆ ತಂದನು.

ಈ ಆಜ್ಞೆಯಿಂದ ಸಾಯಂಕಾಲವಾದ ಮೇಲೆ ನಗರ ಜೀವಿತವು ಸ್ತಂಭಿಸಿತು. ಅಷ್ಟೇ ಅಲ್ಲದೆ ವರ್ತಕ ವ್ಯಾಪಾರಿಗಳಿಗೆಲ್ಲ ಬಹಳ ನಷ್ಟವಾಗ ತೊಡಗಿತು. ಕೆಲವರು ನಗರದ ಪ್ರಮುಖರು ರಾಜಧಾನಿಗೆ ಹೋಗಿ, ಈ ವಿವರಗಳನ್ನೆಲ್ಲಾ ಮಹಾರಾಜನ ಮುಂದೆ ಬಿನ್ನವಿಸಿಕೊಂಡರು.

ರಾಜನು ಮಂತ್ರಿಯ ಮೂಲಕ ವಿರೂಪಾಕ್ಷನಿಗೆ ಹೀಗೊಂದು ಪತ್ರ ಬರೆಯಿಸಿದನು : " ದುಷ್ಟಜನರಿಂದ ಕಷ್ಟವಾಗಬಾರದೆಂಬ ಸದುದ್ದೇಶದಲ್ಲಿ ರಾತ್ರಿಯಲ್ಲಿ ಪ್ರಜೆಗಳು ಬೀದಿಯಲ್ಲಿ ತಿರುಗಬಾರದೆಂಬ ಆಜ್ಞೆ ಅಮಲಿಗೆ ತಂದುದು ಒಳ್ಳೆಯದೇ. ಆದರೆ ನ್ಯಾಯಕ್ಕೆ ಎಲ್ಲಾ ಕಾಲಗಳಲ್ಲಿಯೂ ಬೀದಿಗಳಲ್ಲಿ ತಿರುಗುವಂತಾಗಬೇಕೇ ಹೊರತು, ದುಷ್ಟರಿಗೆ ಅಲ್ಲ. ಆದುದರಿಂದ ನೀನು ಪ್ರಜೆಗಳ ಮೇಲೆ ವಿಧಿಸಿದ ಆಜ್ಞೆಗಳನ್ನು ತಪ್ಪು ಮಾಡಿದವರ ಮೇಲೆ ಮಾತ್ರ ಅಮಲಾಗುವಂತೆ ವ್ಯತ್ಯಾಸಪಡಿಸಿ ಅಮಲಿಗೆ ತರುವ ಆಗತ್ಯ ನಮಗೆ ಉಂಟಾಗಿದೆ ".

ಈ ಪತ್ರವನ್ನು ಪಡೆದುಕೊಂಡ ವಿರೂಪಾಕ್ಷನಿಗೆ ಆದರಲ್ಲಿರುವ ನಿಂದನೆಗಳು ಅರ್ಥವಾದುವು. ಅವನು ಕೂಡಲೇ ಅಪರಾಧಿಗಳೆಲ್ಲರನ್ನೂ ಹಿಡಿಯಲು, ತಕ್ಕ ಏರ್ಪಾಡು ಮಾಡಿ, ಬೇಗದಲ್ಲಿ ನಗರವಲ್ಲಿ ಶಾಂತಿಭದ್ರತೆಗಳು ಮತ್ತೆ ಬರುವಂತೆ ಮಾಡಿದನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

### ಗೆದ್ದ ಶೀರ್ಷಿಕೆಗಳು ೧೯೮೮ ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



Devidas Kasbekar



S. Ganapathy

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಫೆಬ್ರವರಿ ೧೦ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

### ಡಿಸೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಈ ಬೊಂಬೆ ತರಾನೇ ನಾನೂ ಇದ್ದೀನಿ ಅಲ್ವಾ?

ಎರಡನೇ ಫೋಟೋ : ಈ ಬೋಳು ತಲೆಗಿಂತ ನನ್ನ ಹೊಟ್ಟೆಯೇ ವಸೀ ಅಲ್ವಾ?

ಕಳುಹಿಸಿದವರು : ಮಂಜುನಾಥ. ಎನ್. ಚಿಕ್ಕಪೇಟೆ, ದೊಡ್ಡಬಳ್ಳಾಪುರ

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

### ನಿಮಗೆ ಗೊತ್ತೇ? ಉತ್ತರಗಳು :

೧. ನೈರುತೀ ಕೆನ್‌ಟಕೀಯಲ್ಲಿ. ಇಲ್ಲಿಯ ಭೂಗರ್ಭದಲ್ಲಿ ನೂರುಗಟ್ಟಲೆ ಮೈಲುದ್ದದ ಗುಹೆಗಳಿವೆ. ೨. ಗ್ರೀನ್ ಲ್ಯಾಂಡ್‌ನಲ್ಲಿಯೂ, ಆರ್ಕ್‌ಟಿಕ್, ಅಂಟಾರ್ಕ್‌ಟಿಕ್ ಸಮುದ್ರ ಪ್ರಾಂತಗಳಲ್ಲಿಯೂ ಇವೆ. ೩. ದಕ್ಷಿಣಾಫ್ರಿಕಾದಲ್ಲಿರುವ ಥೇಗ್ಲಾ ಜಲಪಾತ. ಇದರ ಎತ್ತರ ೨,೮೧೦ ಅಡಿಗಳು. ೪. ದಕ್ಷಿಣ ಅಮೆರಿಕಾ, ಭೂಮಧ್ಯ ರೇಖೆಯಹತ್ತಿರ ಇರುವ ಚಿಂಬೊರಾಕೋ ಅಗ್ನಿಪರ್ವತ. ೫ ಉದಯಪೂರಿಗೆ ೪೮ ಕಿ. ಮಿ. ದೂರದಲ್ಲಿರುವ ಜೈಸಾಮಂಡ್.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ಮಾಲ್ಟೋವಾ ಟೋಳಿ—
# ತುಂಬು ಉತ್ಸಾಹದ ತುಂಟರು, ಎಲ್ಲೇನು ಮಾಡುವರೋ ಯಾರು ಬಲ್ಲರು!

ತುಂಬಿ ತುಳುಕುವ ಉತ್ಸಾಹ.... ಆಟ-ಪಾಠಗಳಲ್ಲಿ ಉತ್ಸಾಹದ ಜೊತೆಗಾರರೊಂದಿಗೆ ಮನಸಾರೆ ಭಾಗವಹಿಸುವ ಮಕ್ಕಳು. ಅದಕ್ಕಾಗಿಯೇ ಈ ಮಕ್ಕಳಿಗೆ ಬೇಕು— ಮಾಲ್ಟೋವಾ. ಉತ್ಕೃಷ್ಟ ಗೋದಿ, ಶುದ್ಧ ಹಾಲು, ಶ್ರೇಷ್ಠ ಕೋಕೋ ಮತ್ತು ಸಕ್ಕರೆಯ ಸಂಪೂರ್ಣ ಸತ್ವಗಳ ಗಾಢ ಮಿಶ್ರಣವೇ ಮಾಲ್ಟೋವಾ. ಮಕ್ಕಳಿಗಿದು ಎಷ್ಟೊಂದು ಹಿತಕರ.... ಹಾಲಿನೊಂದಿಗೆ ಬೆರೆತಾಗ ಸಿಗುವ ಪಾನೀಯವಂತೂ ಅತ್ಯಂತ ರುಚಿಕರ. ಮಕ್ಕಳಿಗೆ ಮಾಲ್ಟೋವಾ ನೀಡಲು ಇದೇ ಆರಂಭಿಸಿ.

**ಪ್ರಾಕೃತಿಕವಾಗಿ ಪಕ್ವವಾದ ಗೋದಿ ಮತ್ತು ಬಾರ್ಲಿ ಮಾಲ್ಟ್**

ಪಂಜಾಬಿನ ಶ್ರೇಷ್ಠ ಗೋದಿ ಮತ್ತು ಬಾರ್ಲಿ ಮಾಲ್ಟೋವಾ ಕಾರ್ಖಾನೆಯನ್ನು ಸೇರಿ, ಪೌಷ್ಟಿಕ ಮಾಲ್ಟ್ ಆಗಿ ಪರಿವರ್ತಿಸುತ್ತದೆ. ಅವಶ್ಯಕ ಖನಿಜ ಪದಾರ್ಥಗಳು ಮತ್ತು ವಿಟಮಿನ್ B ಸಮೃದ್ಧವಾಗಿರುವ ಮಾಲ್ಟೋವಾ, ದೇಹದಲ್ಲಿ ಸುಲಭವಾಗಿ ಕರಗಬಲ್ಲ ಜೀವನ ಆಹಾರವಾಗಿದೆ.

**ಶುದ್ಧ, ಆರೋಗ್ಯಕರ ಹಾಲು**

ನಮ್ಮ ಸ್ವಂತ ದುಗ್ಧ ಶೇಖರಣಾ ಕೇಂದ್ರಗಳಿಂದ ಬಂದ ಪೌಷ್ಟಿಕ ಹಾಲು ಮಾಲ್ಟೋವಾದಲ್ಲಿ ಸೇರಿದೆ. ಎಂದೆಂದೂ ಇದು ನೂರಕ್ಕೆ ನೂರರಷ್ಟು ಶುದ್ಧ ಹಾಗೂ ಪೌಷ್ಟಿಕ.

**ರುಚಿಕರ ಕೋಕೋ ಸ್ವಾದ**

ಆಮದು ಮಾಡಲಾದ ಉತ್ತಮ ದರ್ಜೆಯ ಕೋಕೋವನ್ನೇ ನಾವು ಬಳಸುತ್ತೇವೆ. ಅಂದರೆ, ಅತ್ಯುತ್ಕೃಷ್ಟ ರುಚಿ ಮತ್ತು ಅಪಾರ ಪೌಷ್ಟಿಕತೆಯ ಭರವಸೆ ನೀಡುತ್ತೇವೆ. ಕೋಕೋ ನಿಮ್ಮಲ್ಲಿ ಹೊಸ ಚೈತನ್ಯವನ್ನು ತುಂಬಿ ಶಾರೀರಿಕ ಹಾಗೂ ಮಾನಸಿಕ ಬೆಳವಣಿಗೆಯಲ್ಲಿ ಸಹಕರಿಸುತ್ತದೆ.

**ಸಕ್ಕರೆಯಿಂದ ಸಾಮರ್ಥ್ಯ**

ಶುದ್ಧ, ಬಿಳುಪಾದ ಸಕ್ಕರೆ, ಶಕ್ತಿ ನೀಡುತ್ತ ಬೆಳೆಯುವ ಎಳೆಯರಲ್ಲಿ ಹೆಚ್ಚಿನ ಸಾಮರ್ಥ್ಯವನ್ನು ತುಂಬಲು ತಕ್ಕುದಾಗಿದೆ.

**ವಿಟಮಿನ್‌ಗಳ ವಿಶಾಲ ಭಂಡಾರ**

ಪ್ರೋಟೀನ್, ಕಾರ್ಬೋಹೈಡ್ರೇಟ್, ವಿಟಮಿನ್ ಮತ್ತು ಖನಿಜ ಪದಾರ್ಥಗಳ ಅಪೂರ್ವ ಮಿಶ್ರಣವೇ— ಮಾಲ್ಟೋವಾ. ವಿಟಮಿನ್ A, ನಿಯಾಸಿನ್, ವಿಟಮಿನ್ $B_1$ ಮತ್ತು ವಿಟಮಿನ್ $D_2$ ಮಾಲ್ಟೋವಾದಲ್ಲಿ ವಿಪುಲವಾಗಿವೆ. ಯಾವುದೇ ಕೃತಕ ಸ್ವಾದ ಇದರಲ್ಲಿ ಸೇರಿಲ್ಲ.






JIL ಜಗತ್‌ಜಿತ್ ಇಂಡಸ್ಟ್ರೀಸ್ ಲಿಮಿಟೆಡ್
ಮಾಡೆಲ್ (ಚಿತ್ರ) ಆಯ್ಕೆ ಸ್ಪರ್ಧೆಯಲ್ಲಿ ಚಿನ್ನದ ಪದಕಗಳನ್ನು
ಗಳಿಸಿದೆ—1981 ಮತ್ತು 1982.

## ವಿಟಮಿನ್-ಭರಿತ ಮಾಲ್ಟೋವಾ: ಆರೋಗ್ಯ, ಬಲ ಮತ್ತು ಶಕ್ತಿಗಾಗಿ

SIMOES/JIL/3/83 KAN




೬

[ಮಹಾ ಮಾಯನ ಅದ್ಭುತ ವಸ್ತುಗಳೆಲ್ಲವನ್ನೂ ಪಿಂಗಳನು ವಶಪಡಿಸಿಕೊಂಡ ಕೂಡಲೇ, ಭಲ್ಲೂಕ ಪರ್ವತಗಳ ಮೇಲಿದ್ದ ದುಷ್ಟಶಕ್ತಿಗಳೆಲ್ಲವೂ ನಾಯಕನಿಲ್ಲದಂತಾಗಿ ತಮ್ಮೊಳಗೆ ಜಗಳಾಡಿಕೊಳ್ಳಲು ತೊಡಗಿದವು. ಪದ್ಮಪಾದನು ಭಲ್ಲೂಕಕೇತುವನ್ನು ಕರೆತರಲು ಪಿಂಗಳನನ್ನು ಕಳುಹಿಸಿದನು. ಪಿಂಗಳನು ಭಲ್ಲೂಕಕೇತುವನ್ನು ಕರೆದುಕೊಂಡು ಬಂದ ಕೂಡಲೇ ದುಷ್ಟಶಕ್ತಿಗಳೆಲ್ಲವೂ ಕೂಗಾಡುತ್ತ ಭಲ್ಲೂಕಕೇತುವಿನ ಬಳಿಗೆ ಓಡಿಬರತೊಡಗಿದವು.]

"ಇನ್ನು ನಾವು ಜಗಳಾಡ ಬೇಕಾಗಿಲ್ಲ. ನಮಗೆ ತಕ್ಕ ಮಹಾನಾಯಕ ಬಂದ, ಬಂದ..." ಎಂದು ಆ ದುಷ್ಟ ಶಕ್ತಿಯ ಪಿಶಾಚಿಗಳು ಕೂಗಾಡುತ್ತ ಹಾರಿ, ಕುಣಿಯುತ್ತ ಬರುವುದನ್ನು ನೋಡಿ, ಪದ್ಮಪಾದನಿಗೆ ಮುಗುಳುನಗು ಬರತೊಡಗಿತು. ಆದರೆ ಭಲ್ಲೂಕಕೇತು ಆ ಪಿಶಾಚಿಗಳ ಆರ್ಭಟೆಗಳನ್ನೂ, ರೀತಿಯನ್ನೂ ನೋಡಿ, ಜಿಗುಪ್ಸೆಯ ಮುಖ ಮಾಡಿಕೊಂಡು ತಲೆಯನ್ನು ಆಚೆಗೆ ತಿರುಗಿಸಿಕೊಂಡನು. ಪದ್ಮಪಾದನು ಅವನನ್ನು ನೋಡಿ ಏನೋ ಹೇಳಲಿರುವುದನ್ನು ಗಮನಿಸಿ, ಭಲ್ಲೂಕಕೇತು ಪಿಂಗಳನಿಗೆ, ಕೈ ಮುಗಿದು,

"ಪಿಂಗಳ ಪ್ರಭೂ! ಈಗ ನೀವೇ ನನ್ನನ್ನು ಈ ಪೀಡೆಗಳಿಂದ ಕಾಪಾಡಬೇಕು. ನಿಮ್ಮ ಗುರುಗಳ ಭಾವನೆ ನನಗೆ ಗೊತ್ತಾಯಿತು. ನಾನು ಈ ಕ್ಷುದ್ರ ಪಿಶಾಚಿಗಳಿಗೆ ನಾಯಕನಾಗಿರಲಾರೆ. ದಯಮಾಡಿ ನಿಮ್ಮ ಗುರುವನ್ನು ಒಪ್ಪಿಸಿ, ನನ್ನನ್ನು ನಿಮ್ಮೊಂದಿಗೆ ಕರೆದುಕೊಂಡು ಹೋಗಿಬಿಡಿ. ನಾನಿನ್ನು ನಿಮಗೇ ಸೇವಕ. ನಿಮ್ಮ ಸೇವೆಯೊಂದೇ ನನಗೆ ಮಹಾ ಪ್ರಸಾದ" ಎಂದನು.

ಪಿಂಗಳನು ಏನೂ ಉತ್ತರ ಕೊಡದೆ ಪದ್ಮಪಾದನ ಮುಖ ನೋಡಿದನು. ಪದ್ಮಪಾದನು ಭಲ್ಲೂಕ



ಕೇತುವಿನ ಭುಜವನ್ನು ತಟ್ಟುತ್ತ, "ಭಲ್ಲೂಕಕೇತೂ! ನೀನು ಕೇವಲ ಭಾವಾವೇಗಕ್ಕೆ ಒಳಗಾಗದೆ ಆಲೋಚಿಸಿ ನೋಡು. ನೀನು ಈ ಪರ್ವತ ಪ್ರಾಂತಗಳಲ್ಲಿರುವ ಎಲ್ಲಾ ಪಿಶಾಚಗಣಗಳಿಗೂ ನಾಯಕತ್ವ ವಹಿಸಿಕೊಂಡಿರುವುದೇ ಎಲ್ಲರಿಗೂ ಒಳ್ಳೆಯದೆಂದು ನನ್ನ ಅಭಿಪ್ರಾಯ. ಅದರಿಂದ ನಿನಗೂ ದೊಡ್ಡ ಹೆಸರೂ ಮಹತ್ತೂ ಬರುತ್ತದೆ." ಎಂದನು.

"ಅಯ್ಯಯ್ಯೋ! ಭಾವಾವೇಗದಲ್ಲಿ ನಾನಿಲ್ಲ ಪ್ರಭೂ. ನನಗೆ ಪಿಶಾಚಿಗಳ ನಡುವಿನ ಜೀವಿತ ಬೇಡ, ಸಾಕಾಗಿ ಹೋಯಿತು. ಆ ದೊಡ್ಡತನವೂ, ಮಹತ್ತೂ, ಕೀರ್ತಿಯೂ ನನಗೆ ಬೇಡವೇ ಬೇಡ!" ಎಂದು ಭಲ್ಲೂಕಕೇತು ಪದ್ಮಪಾದನಿಗೆ ಸಾಷ್ಟಾಂಗ ನಮಸ್ಕಾರ ಹಾಕಿದನು.

ಅಷ್ಟರಲ್ಲಿ ವಿಧವಿಧವಾದ ಪಿಶಾಚಿಗಳೆಲ್ಲಾ ಅವರ ಸುತ್ತಲೂ ಕೂಡಿ "ಓಹೋಂ! ಭಲ್ಲೂಕಕೇತೂ! ನಮ್ಮ ಒಡೆಯಾ! ಓಹೋಂ! ಓಹೋಂ!" ಎಂದು ಸಂಭ್ರಮದಿಂದ ಕೂಗಾಡತೊಡಗಿದುವು. ಕರ್ಣ ಕಠೋರವಾದ ಅವುಗಳ ವಿಕೃತನಾದಗಳನ್ನು ಕೇಳಿ, ಪಿಂಗಳನು ಕಿವಿಗಳನ್ನು ಮುಚ್ಚಿಕೊಂಡು ಛೀತ್ಕರಿಸಿ, "ಅಯ್ಯಾ, ಪದ್ಮಪಾದರೇ! ನನಗೊಂದು ಒಳ್ಳೆಯ ಉಪಾಯ ತೋರುತ್ತದೆ. ಹಾಗೆ ಮಾಡಿದರೆ ಈ ಭಲ್ಲೂಕಕೇತುವಿಗೂ, ನಮಗೂ ಸಹಾ ಎಲ್ಲಾ ಸಮಸ್ಯೆಗಳೂ ಅಳಿಸಿಯೋಗುತ್ತವೆ. ಅಪ್ಪಣೆಯಾದರೆ ಹೇಳುತ್ತೇನೆ." ಎಂದನು.

"ಅದೇನು? ಹೇಳಿಬಿಡು" ಎಂದನು ಪದ್ಮಪಾದ.

"ಭಲ್ಲೂಕಕೇತುವಿಗೆ ನಮ್ಮನ್ನು ಸೇವಿಸಿಕೊಂಡಿರಬೇಕೆಂದು ಬಹಳ ಆಸೆಯಾಗಿದೆ. ಆ ಕಾರಣದಿಂದ ಅವನು ಈ ಪಿಶಾಚಿಗಳಿಗೆ ನಾಯಕನಾಗಿ ಈ ಪರ್ವತ ಪ್ರಾಂತದಲ್ಲಿರಲು ಇಷ್ಟಪಡುವುದಿಲ್ಲ. ನಾವು ಈ ಪಿಶಾಚಿಗಳನ್ನು ಹೀಗೆಯೇ ಬಿಟ್ಟು ಹೋಗಿಬಿಟ್ಟರೆ ಇವುಗಳು ಎಂತೆಂತಹ ಘೋರಕಾರ್ಯಗಳನ್ನಾದರೂ ಕೇಳುವವರಿಲ್ಲದೆ ಮಾಡುತ್ತಾ ಇದ್ದರೆ, ಲೋಕದ ಜನರಿಗೂ ಕಷ್ಟ, ನಮಗೂ ಕೆಟ್ಟ ಹೆಸರು. ಅದ್ದರಿಂದ ಇವುಗಳನ್ನು ಸಮೂಲವಾಗಿ ನಾಶಮಾಡಿ ಬಿಡಬೇಕು. ಇವುಗಳ ಮೇಲೆ ಅಪ್ರತಿಮವಾದ ಮಹಾಮಾಯನ ಕತ್ತಿಯನ್ನು ಪ್ರಯೋಗಿಸಿ ಹತಮಾಡಿ ಬಿಡೋಣ" ಎಂದನು ಪಿಂಗಳ.

ಆ ಮಾತು ಕೇಳಿದ ಕೂಡಲೇ ಪಿಶಾಚಿಗಳೆಲ್ಲಾ ಹಾಹಾಕಾರ ಮಾಡಿದುವು, ತಮ್ಮ ಸರ್ವನಾಶವಾಗುವುದೆಂದು ಹೆದರಿ "ಬೇಡ್ರೀ! ಬೇಡ್ರೀ!" ಎಂದು ಅರಚಿ, ಕಡೆಗೆ ಅವೆಲ್ಲವೂ ಏಕಕಂಠದಿಂದ, "ಓ ಮಹಾಮಾಂತ್ರಿಕ ಪ್ರಭುಗಳೇ! ನಮ್ಮನ್ನು ಹೀಗೆ ನಾಶಮಾಡುವುದು ನ್ಯಾಯವಲ್ಲಾ! ಧರ್ಮವಲ್ಲಾ! ನಮ್ಮ ಪ್ರಭು ಭಲ್ಲೂಕಕೇತು ನಮಗೆ ನಾಯಕರಾಗಿರಲು ಒಪ್ಪದಿದ್ದರೆ ನಾವೇ ನಮ್ಮ ನಾಯಕನನ್ನು ಆರಿಸಿಕೊಳ್ಳುತ್ತೇವೆ. ನೀವು ಅನುಜ್ಞೆ ಕೊಟ್ಟರೇ ಸಾಕು!" ಎಂದುವು.



"ಹಾಗೇನು ! ಒಳ್ಳೇದು. ನನ್ನ ಅಭ್ಯಂತರವೇ ನಿಲ್ಲ. ನಿಮ್ಮ ನಾಯಕತ್ವದ ಸಮಸ್ಯೆಯನ್ನು ಹೇಗೆ ಪರಿಷ್ಕರಿಸಿಕೊಳ್ಳುವಿರೆಂಬುದನ್ನು ಈಗಲೇ ಮಾಡಿ ತೋರಿಸಿರಿ, ನಾವೂ ತೃಪ್ತರಾಗುತ್ತೇವೆ" ಎಂದನು ಪದ್ಮಪಾದ.

"ನಿಮ್ಮಂಥ ಮನುಷ್ಯರೊಳಗೆ ಹೇಗೋ ಹಾಗೆಯೇ ನಮ್ಮಲ್ಲಿಯೂ ಹೆಚ್ಚಿನ ಬಲದರ್ಪ ಗಳಿರುವವನೇ ನಾಯಕನಾಗುತ್ತಾನೆ. ಆ ಶಕ್ತಿ ಯಾರಿಗೆ ಹೆಚ್ಚಾಗಿದೆ ಎಂಬುದನ್ನು ಈಗಲೇ ರುಜುಪಡಿಸಿ ಕೊಳ್ಳುತ್ತೇವೆ." ಎಂದು ಪಿಶಾಚಿಗಳೆಲ್ಲಾ ಮುಷ್ಟಿಗೆ ಮುಷ್ಟಿ, ತೋಳಿಗೆ ತೋಳು ಹೊಡೆದು ಒಂದರ ಮೇಲೊಂದು ಯುದ್ಧಕ್ಕೆ ತೊಡಗಿದುವು. ಆದರಿಂದ ಇನ್ನೊಂದು ಬಗೆಯ ಕೋಲಾಹಲವೆದ್ದಿತು.

"ಭೇಷ್ ! ಈ ಕ್ರಮ ಚೆನ್ನಾಗಿದೆ !" ಎಂದು ಪಿಂಗಳನು ಚಪ್ಪಾಳೆ ತಟ್ಟಿ ನೋಡುತ್ತಿದ್ದನು.

ಪಿಶಾಚಿಗಳು ನಾಯಕತ್ವಕ್ಕಾಗಿ ಪ್ರಾರಂಭಿಸಿದ ಹೋರಾಟ ಬೇಗನೇ ಮುಗಿಯಲಿಲ್ಲ. ಅವು ಕ್ಷಣ ಕ್ಷಣಕ್ಕೂ ಬೇರೆಬೇರೆ ರೂಪಗಳನ್ನು ಧರಿಸುತ್ತ ಯುದ್ಧ ಮಾಡುತ್ತಿದ್ದುವು. ಹುಲಿರೂಪವನ್ನು ನೆಲಸಮ ಮಾಡಲು ಆನೆಗಳ ರೂಪ ಧರಿಸಿದರೆ, ಆನೆ ಗಳನ್ನು ಹತಮಾಡಲು ಕೆಲವು ಪಿಶಾಚಿಗಳು ಸಿಂಹಾ ಕೃತಿಗಳನ್ನು ಧರಿಸಿದುವು. ಕೆಲವು ನಾಗರಹಾವು ಗಳಾದರೆ, ಕೆಲವು ಗರುಡಪಕ್ಷಿಗಳಾದುವು. ಪಿಂಗಳನಿಗೆ ಕಣ್ಣಿಗೆ ಹಬ್ಬದಂತಹ ಆಟವೆನಿಸಿತು.

ಹೀಗೆ ಸ್ವಲ್ಪ ಹೊತ್ತು ವಿಕೃತರೀತಿಯ ಘೋರ ಸಂಗ್ರಾಮವು ನಡೆದು, ಅಳಿದುಳಿದ ಪಿಶಾಚಿಗಳು ಕಟ್ಟಕಡೆಗೆ ತಮ್ಮ ನಾಯಕನಾಗಿ ದೊಡ್ಡದೊಂದು ಭೂತವನ್ನು ಆರಿಸಿ ಜೈಜೈ ಎಂದು ಘೋಷಿಸಿದುವು. ಅಂತೂ ಅವುಗಳಿಗೆಲ್ಲ ಒಬ್ಬ ನಾಯಕನು ಏರ್ಪಟ್ಟು ದನ್ನು ನೋಡಿ ಪದ್ಮಪಾದನಿಗೆ ಬಹಳ ಸಂತೋಷ ವಾಯಿತು. ಆವನು ಮುಂದೆ ಹೋಗಿ ಪಿಶಾಚಿಗಳ ನಾಯಕನಾದ ಮಹಾಭೂತನಿಗೆ ಆಶೀರ್ವಾದ ಮಾಡಿ, "ಸರಿ. ಇನ್ನು ನೀವೆಲ್ಲಾ ಸ್ವೇಚ್ಛೆಯಾಗಿ ಈ ಭಲ್ಲೂಕ ಪರ್ವತ ಪ್ರಾಂತದಲ್ಲಿ ಪ್ರಭಾವಶಾಲಿ ಗಳಾಗಿರಿ. ಅಹಂಕಾರಪಟ್ಟು ಊರೊಳಗೆ ಬಂದು ಮಾನವರ ಮೇಲೆ ನಿಮ್ಮ ಚೇಷ್ಟೆ ತೋರಿಸಿದರೆ ಜಾಗ್ರತೆ ! ಅದುವರೆಗೆ ನಿಮ್ಮ ತಂಟೆಗೆ ನಾನಾಗಲಿ, ಪಿಂಗಳನಾಗಲಿ ಬರುವುದಿಲ್ಲವೆಂದು ಅಭಯ ನೀಡು ತ್ತೇನೆ. ಇನ್ನು ನಿಮ್ಮ ಪಾಡಿಗೆ ಹೊರಟು ಹೋಗಿ ಬಿಡಿರಿ !" ಎಂದನು.

ಪಿಶಾಚಿಗಳೆಲ್ಲ ಜಯಜಯಾಕಾರ ಮಾಡುತ್ತ, ತಮ್ಮ ಹೊಸ ನಾಯಕ ಹೆಬ್ಭೂತವನ್ನು, ಹೆಗಲುಗಳ ಮೇಲೆ ಏರಿಸಿಕೊಂಡು ಪರ್ವತಗಳ ಮೇಲೆ ಹೊರಟು ಹೋದುವು.

ಸ್ವಲ್ಪ ಹೊತ್ತು ಅವುಗಳನ್ನು ನೋಡುತ್ತಾ ಇದ್ದ ಪದ್ಮಪಾದನು ಪಿಂಗಳನ ಕಡೆಗೆ ತಿರುಗಿ, "ಪಿಂಗಳಾ. ನಾವು ಅಷ್ಟಕಷ್ಟಗಳನ್ನೆಲ್ಲ ದಾಟಿ ನಮಗೆ ಬೇಕಾದ

ಶಕ್ತಿಗಳನ್ನೆಲ್ಲಾ ಸಂಪಾದಿಸಿಕೊಂಡಿದ್ದೇವೆ. ಇದರಲ್ಲಿ ನೀನು ಮಾಡಿದ ಸಹಾಯವನ್ನು ನಾನು ಎಂದಿಗೂ ಮರೆಯಲಾರೆನು. ಮರೆಯಬಾರದು. ಮರೆಯುವಂತಿಲ್ಲ. ನೀನು ನಿನ್ನ ಮನೆಗೆ ಹೋಗುವ ಮೊದಲು, ನನ್ನ ಮನೆಯಲ್ಲಿ ಕೆಲವು ದಿನಗಳವರೆಗೆ ಅತಿಥಿಯಾಗಿರಬೇಕು. ತಾಯಿಯನ್ನು ನೋಡಲು ಅವಸರವೇನಿಲ್ಲವಷ್ಟೆ ? ಸಂತೋಷವಾಗಿ ಒಪ್ಪುವೆಯಾ ?" ಎಂದು ಕೇಳಿದನು,

ಹಾಗೆಯೇ ಆಗಲೆಂದು ಪಿಂಗಳನು ಒಪ್ಪಿದನು. ಪದ್ಮಪಾದನು ಒಂದು ಹಿಡಿ ಮಣ್ಣು ತೆಗೆದು ಮಂತ್ರಿಸಿ ಭೂಮಿಯ ಮೇಲೆ ಚೆಲ್ಲಿದನು. ಕೂಡಲೇ ಪಿಶಾಚ ಗಾರ್ದಭಗಳೆರಡು ಲಟಲಟನೆ ನೆಲವನ್ನು ಸೀಳಿಕೊಂಡು ಓಂಡ್ರಿಸುತ್ತಾ, ಭೂಮಿಯ ಮೇಲೆ ಹಾರಿ ನಿಂತವು,

ಪದ್ಮಪಾದನು ಒಂದು ಪಿಶಾಚ ಗಾರ್ದಭದ ಮೇಲೆ ಹಾರಿ ಕುಳಿತನು. ಪಿಂಗಳನು ಎರಡನೇ ಗಾರ್ದಭದ ಹತ್ತಿರ ಹೋಗುವುದನ್ನು ನೋಡಿ, ಭಲ್ಲೂಕಕೇತು ಅವನ ಮುಂದೆ ಮೊಣಕಾಲೂರಿ, "ಪ್ರಭೂ ! ನೀವು ನನ್ನ ಹೆಗಲಿನ ಮೇಲೆ ಕುಳಿತು ಕೊಳ್ಳಿ. ನಾನು ನಿಮ್ಮ ಸದಾ ಸೇವಕನು ! ಹೂವಿನ ಹಾಗೆ ಎತ್ತಿಕೊಂಡು ಹೋಗುತ್ತೇನೆ." ಎಂದನು.

ಪಿಂಗಳನು ಪದ್ಮಪಾದನ ಅನುಮತಿಯಂತೆ, ಮುಗುಳು ನಗುತ್ತ, ಭಲ್ಲೂಕಕೇತುವಿನ ಹೆಗಲ ಮೇಲೇರಿ ಕುಳಿತನು. ಮರುಕ್ಷಣದಲ್ಲಿ ಪದ್ಮಪಾದನ ಗಾರ್ದಭವು ನಾಲ್ಕಾರು ಹೆಜ್ಜೆ ನೆಲದಲ್ಲಿಟ್ಟು ಆಕಾಶಕ್ಕೇರಿತು. ಅದರ ಹಿಂದೆಯೇ ಭಲ್ಲೂಕಕೇತು ಕೂಡಾ ಆಕಾಶಕ್ಕೆ ಹಾರಿ ರೊಯ್ಯನೆ ಹೋದನು. ರಾಹುತರಿಲ್ಲದ ಎರಡನೇ ಪಿಶಾಚ ಗಾರ್ದಭವು ಅವರಿಬ್ಬರ ಹಿಂದೆ ಸುಮ್ಮನೆ ಹಾರುತ್ತಾ ಹೋಗ ತೊಡಗಿತು.

ಕಾಡುಗಳು, ಗುಡ್ಡಗಳು, ನದಿಗಳು ಹಿಂದೆ ಹಿಂದೆ ಹೋದುವು. ಸೂರ್ಯನು ಮುಳುಗುವ ವೇಳೆ ಹತ್ತಿರ ಹತ್ತಿರ ಆಗುತ್ತಿರಲು, ಅವರು ಒಂದಾನೊಂದು ನಗರವನ್ನು ಸಮೀಪಿಸುತ್ತಿದ್ದರು. ಬೊಂಬೆ ಮನೆಗಳ ಹಾಗೆ ಕೆಳಗೆ ಕಾಣುವ ನಗರವನ್ನು



ಪದ್ಮಪಾದನು ಪಿಂಗಳನಿಗೆ ತೋರಿಸುತ್ತ, "ಅಗೋ ನೋಡು! ಅಲ್ಲಿ ಕಾಣುವ ಗುಡ್ಡವನ್ನು ಬಳಸಿಕೊಂಡು ಹಾವಿನ ಹಾಗೆ ಹರಿಯುತ್ತಿರುವ ಬೆಟ್ಟದ ನದಿಯ ಬದಿಯಲ್ಲಿ, ಆ ಮರಗಳ ಗುಂಪು ಕಾಣುತ್ತದಷ್ಟೆ? ಅದರಲ್ಲಿ ಹಾಲುಗಲ್ಲುಗಳ ಮನೆ ಹೇಗೆ ಹೊಳೆಯುತ್ತಾ ಇದೆ! ಅದೇ ನನ್ನ ಪಿತೃಗೃಹ! ನನ್ನ ಅಣ್ಣಂದಿರಿಬ್ಬರೂ ಶುಕಸರೋವರಕ್ಕೆ ಬಲಿಯಾಗಿ ಹೋದರು. ಈಗ ನಾನೇ ಆ ಮನೆಗೆ ಅಧಿಪತಿ! ನನ್ನ ತಂದೆ ಬಿಟ್ಟುಹೋದ ಮಂತ್ರ ಗ್ರಂಥವು ಕೂಡಾ ಇನ್ನು ನನ್ನದೇ!" ಎಂದನು ಉತ್ಸಾಹದಿಂದ.

ಅವನ ಸಂಜ್ಞೆಯಿಂದ ಅವನು ಏರಿಕೊಂಡಿದ್ದ ದೆವ್ವದ ಕತ್ತೆ, ಕೆಳಗಿಳಿಯುತ್ತಾ, ಎತ್ತರ ಪ್ರಾಕಾರಗಳಿರುವ ಪದ್ಮಪಾದನ ಮನೆಯ ಮುಂದೆ ನೆಲಕ್ಕಿಳಿದು ನಿಂತಿತು. ಭಲ್ಲೂಕಕೇತುವೂ ಅಲ್ಲಿಯೇ ನೆಲಕ್ಕಿಳಿದು ಪಿಂಗಳನನ್ನು ಇಳಿಸಿದನು. ಪ್ರಾಕಾರದ ಮುಂಭಾಗದಲ್ಲಿರುವ ದೊಡ್ಡ ಕಬ್ಬಿಣದ ಬಾಗಿಲ ಮುಂದೆ ಇಬ್ಬರು ನೀಗ್ರೋ ಗುಲಾಮರು ಕಾವಲು ಕಾಯುತ್ತಿದ್ದರು. ಪದ್ಮಪಾದನನ್ನು ನೋಡಿದ ಕೂಡಲೇ ಅವರು ತಮ್ಮ ಕೈಗಳಲ್ಲಿದ್ದ ಶೂಲವನ್ನು ಮೇಲೆತ್ತಿ "ಜೈ ಪದ್ಮಪಾದಾ!" ಎಂದು ಜಯಘೋಷ ಮಾಡಿದರು.

ಮೊದಲು ಆ ಬಾಗಿಲಿನಲ್ಲಿ ಪದ್ಮಪಾದನು ಒಳಗೆ ಹೊಕ್ಕನು. ಅವನನ್ನು ಅನುಸರಿಸಿ ಪಿಂಗಳನೂ ನಡೆದನು. ದೆವ್ವದ ಕತ್ತೆಗಳೆರಡೂ ಮಾಯವಾದುವು. ಭಲ್ಲೂಕಕೇತು ಒಂದು ಬದಿಯಲ್ಲಿ ಕೈಕಟ್ಟಿ ನಿಂತನು. ಪದ್ಮಪಾದನೂ ಪಿಂಗಳನೂ ಮನೆಯ ಮುಂದಿರುವ ಮರಗಳ ಮಧ್ಯದಲ್ಲಿ ನಡೆದು ಭವನವನ್ನು ಸಮೀಪಿಸಿದರು. ಆಗ ಮೆಟ್ಟಿಲಿನ ಹತ್ತಿರ ಮಾರುದ್ದದ ಬಿಳೀಗಡ್ಡದಿಂದೊಪ್ಪುವ ಒಬ್ಬ ವೃದ್ಧನು ಇದಿರಾದನು. ಪದ್ಮಪಾದನು ಅವನನ್ನು ನೋಡಿದ ಕೂಡಲೇ ಬಾಗಿ ಪ್ರಣಾಮಮಾಡಿ, ಹಿಂದೆ ನೋಡಿ ಪಿಂಗಳನೊಂದಿಗೆ, "ಪಿಂಗಳಾ! ಇವರೇ ನಮ್ಮ ತಂದೆಯ ಗುರುಗಳು!" ಎಂದನು.

ಪಿಂಗಳನು ಕೂಡಾ ಆತನಿಗೆ ಬಾಗಿ ನಮಸ್ಕಾರ ಮಾಡಿದನು. ವೃದ್ಧನು ಪಿಂಗಳನನ್ನು ಸೂಕ್ಷ್ಮವಾಗಿ






ಪರಿಶೀಲಿಸಿ ನೋಡಿ, ಪದ್ಮಪಾದನೊಂದಿಗೆ, "ಪದ್ಮಪಾದಾ! ಈ ಹುಡುಗನು ಯಾರು? ಹೆಸರನ್ನೇನೋ ಹೇಳಿದಿ. ಅವಂತೀ ನಗರದ ಜಾಲರಿಯಲ್ಲವಷ್ಟೆ?" ಎಂದು ಕೇಳಿದನು.

"ಆ ಜಾಲರಿ ಹುಡುಗನೇ ಇವನು. ನಮಗೆ ಬೇಕಾದವನಾಗಿದ್ದ ಪಿಂಗಳನೆಂದರೆ ಇವನೇ!" ಎಂದನು ಪದ್ಮಪಾದ. ಅದನ್ನು ಕೇಳಿ ವೃದ್ಧನು ಪರಮಾನಂದಗೊಂಡು, "ಹೌದೆ? ಹಾಗಾದರೆ ನೀನು ಮಹಾಮಾಯನ ಸಮಾಧಿಯಲ್ಲಿದ್ದ ಅಪೂರ್ವ ಶಕ್ತಿಗಳೆಲ್ಲವನ್ನೂ ವಶಪಡಿಸಿಕೊಂಡಿರುವೆಯೆಂದಾಯಿತು" ಎಂದನು.

ಪದ್ಮಪಾದನು ಬಾಯಿಯಿಂದ ಏನೂ ಹೇಳದೆ, ತನ್ನ ಬೆರಳಿನಲ್ಲಿರುವ ಉಂಗುರವನ್ನೂ, ವಜ್ರಖಚಿತ ಹಿಡಿಕೆಯ ಕತ್ತಿಯನ್ನೂ, ಭೂಗೋಳವನ್ನೂ ವೃದ್ಧನಿಗೆ ತೋರಿಸಿದನು. ವೃದ್ಧನು ಅವುಗಳನ್ನು ಸ್ವಲ್ಪ ಹೊತ್ತು ಪರೀಕ್ಷಿಸಿ ನೋಡಿ, "ಪದ್ಮಪಾದಾ, ಇನ್ನು ನಿನ್ನನ್ನು ಜಯಿಸುವಂತಹ ಮಾಂತ್ರಿಕನು ಈ ಪ್ರಪಂಚದಲ್ಲಿ ಇನ್ನೊಬ್ಬನಿಲ್ಲ. ನಿನ್ನ ತಂದೆ ಬಹಳ ಪ್ರಯತ್ನಪಟ್ಟು ಕೂಡಾ ಸಾಧಿಸಲಾಗದ ಕೆಲಸವನ್ನು ನೀನು ಸಾಧಿಸಿದವನಾದೆ. ಆ ವಿಧವಾಗಿ ನಿನ್ನ ತಂದೆಯ ಆತ್ಮಕ್ಕೆ ಶಾಂತಿ ದೊರಕುವಂತೆ ಮಾಡಿದ ಪುಣ್ಯ ನಿನ್ನದಾಯಿತು. ಧನ್ಯನಾದೆಯಪ್ಪ" ಎಂದನು.

"ಇನ್ನು ನನ್ನ ತಂದೆ ಬಿಟ್ಟು ಹೋದ ಮಂತ್ರ ಗ್ರಂಥದ ಪೂರ್ತಿ ಹಕ್ಕುದಾರ ನಾನೇ ತಾನೆ?" ಎಂದು ಪದ್ಮಪಾದನು ಕೇಳಿದನು.

ವೃದ್ಧನು ಮುಗುಳು ನಗುವನ್ನು ತೋರಿಸಿ, "ಪ್ರಪಂಚವನ್ನೇ ಜಯಿಸುವಂತಹ ಎಲ್ಲಾ ಶಕ್ತಿಗಳೂ ಈಗ ನಿನ್ನ ಸ್ವಾಧೀನದಲ್ಲಿರುವಾಗ, ಆ ಮಂತ್ರಗ್ರಂಥದಿಂದ ಹೊಸದಾಗಿ ನಿನಗೇನಾಗ ಬೇಕಾಗಿದೆ? ನೀನು ಸಂಪಾದಿಸಿದ ಶಕ್ತಿಗಳಿಗಿಂತ ಹೆಚ್ಚಿಗೆ ಅದರಲ್ಲಿ ಏನೂ ಇಲ್ಲ. ತಾನು ಸಾಧಿಸಲಾಗದವುಗಳನ್ನು ತನ್ನ ಮಕ್ಕಳಿಂದ ಸಾಧಿಸಬೇಕೆಂಬುದೇ ನಿನ್ನ ತಂದೆಯ ಕೊನೆಯ ಆಸೆ. ಸಾಯುವ ಮೊದಲು ಆ ಮಂತ್ರಗ್ರಂಥವನ್ನು ಕುರಿತು ಅಂತಹ ಷರತ್ತುಗಳನ್ನು ಇಟ್ಟಿದ್ದಾನೆ. ಮಹಾಮಾಯನು ನಿನ್ನ ತಂದೆಗೆ ಪ್ರಬಲ ವಿರೋಧಿ. ನೀನು ಅವನನ್ನೇ ಜಯಿಸಿದಂತಾಯಿತು. ಇನ್ನೇನು ಕಡಿಮೆ ನಿನಗೆ?" ಎಂದನು.

ವೃದ್ಧನು ಹೇಳಿದ ಮಾತನ್ನು ಕೇಳಿದ ಮೇಲೆಯಷ್ಟೇ ಪದ್ಮಪಾದನಿಗೆ ತನ್ನ ತಂದೆಯ ಅಭಿಪ್ರಾಯವೇನೆಂದು ಅರ್ಥವಾಯಿತು. ತನ್ನ ಪ್ರಬಲ ವಿರೋಧಿಯಾದ ಮಹಾಮಾಯನನ್ನು ಶಕ್ತಿ ಹೀನನನ್ನಾಗಿ ಮಾಡಲಿಕ್ಕಾಗಿಯೇ ತಂದೆ ತನ್ನನ್ನು ಉಪಯೋಗಿಸಿದ್ದಾನೆಂಬುದು ಸ್ಪಷ್ಟವಾಯಿತು. ಸಮರ್ಥರಾದ ಇಬ್ಬರು ಅಣ್ಣಂದಿರ ಬಲಿಯಾದ ಮೇಲೆ ವಿಜಯವು ತನ್ನ ಪಾಲಿಗೆ ಬಂದಿದೆ.

ಪದ್ಮಪಾದನು ಇಂತಹ ಆಲೋಚನೆಗಳಲ್ಲಿ ತೊಳಲಿಕೊಂಡಿರುವಾಗ, ವೃದ್ಧನು ಪಿಂಗಳನ ಭುಜ



ವನ್ನು ಆಪ್ಯಾಯತೆಯಿಂದ ತಟ್ಟುತ್ತ, "ಅವಂತಿ ನಗರದ ಜಾಲರಿ ಹುಡುಗನಾದ ನೀನು, ಪದ್ಮ ಪಾದನಿಗೆ ಸಿಕ್ಕಿದ್ದೊಂದು ಅದೃಷ್ಟ. ನಿನ್ನಿಂದ ಒಂದು ಮಹಾ ಕಾರ್ಯವು ಸಾಧಿಸಲ್ಪಟ್ಟಿತು. ಇದಕ್ಕಾಗಿ ನಾನು ನಿನ್ನನ್ನು ಮನಸಾರೆ ಅಭಿನಂದಿಸುತ್ತೇನೆ" ಎಂದನು.

ಪಿಂಗಳನು ವೃದ್ಧನ ಪಾದ ಹಿಡಿದು ವಂದಿಸಿದನು. ಅಲ್ಲಿ ಪಿಂಗಳನು ಒಂದು ವಾರದವರೆಗೆ ಪದ್ಮಪಾದನ ಅತಿಥಿಯಾಗಿದ್ದ ಮೇಲೆ, ತನ್ನ ಮನೆಗೆ ಹೋಗಲು ಸಿದ್ಧನಾದನು. ಆಗ ಪದ್ಮಪಾದನು ಅವನಿಗೆ ಬೆಲೆ ಬಾಳುವ ದುಸ್ತುಗಳನ್ನೂ, ಬಂಗಾರವನ್ನೂ, ರತ್ನ ಗಳನ್ನೂ ಬಹುಮಾನವಾಗಿ ಕೊಟ್ಟನು. ಪಿಂಗಳನು ಬಹಳ ಕೃತಜ್ಞತೆಯಿಂದ ಅವುಗಳನ್ನೆಲ್ಲ ಸ್ವೀಕರಿಸಿದನು.

ಅಷ್ಟಕ್ಕೆ ತೃಪ್ತನಾಗದೆ ಪದ್ಮಪಾದನು ಅವನನ್ನು ಕಳುಹಿಸಿಕೊಡಲು ಪ್ರಾಕಾರದ್ವಾರದವರೆಗೂ ಹೋಗಿ, ಅವನ ಮುಂದೆ, ಮಹಾ ಮಾಯನ ಸಮಾಧಿಯೊಳ ಗಿಂದ ತಂದು ಕೊಂಡ ಮೂರು ವಸ್ತುಗಳನ್ನೂ ಪಿಂಗಳನಿಗೆ ತೋರಿಸಿ, "ಇಗೋ ಪಿಂಗಳಾ! ಇವು ಗಳಲ್ಲಿ ನಿನಗೆ ಬೇಕಾಗಿರುವಂತಹ ಯಾವುದಾದರೂ ಒಂದನ್ನು ಸಂತೋಷವಾಗಿ ನಿನಗೆ ಕೊಡುತ್ತೇನೆ. ತೆಗೆದುಕೋ" ಎಂದನು.

ಪಿಂಗಳನು ಅದಕ್ಕೇನೂ ಅಂಗೀಕಾರ ತೋರಲಿಲ್ಲ. ಅವನು ಮುಗುಳು ನಗುತ್ತ "ಅಯ್ಯಾ, ಪದ್ಮ ಪಾದರೇ! ಮಹಾಶಕ್ತಿ ಸಂಪನ್ನಗಳಾಗಿರುವ ಈ ವಸ್ತುಗಳು ಸಾಮಾನ್ಯ ಜಾಲರಿಯಾದ ನನ್ನ ಬಳಿ ಯಲ್ಲಿರುವುದಕ್ಕಿಂತ, ನಿಮ್ಮ ಬಳಿಯಲ್ಲಿರಬೇಕಾದುದೇ ಚೆನ್ನ. ಇವುಗಳಲ್ಲಿ ಒಂದಕ್ಕೂ ನಾನು ಅರ್ಹನಲ್ಲ. ನೀವು ಬೇರೆ ವಿಧವಾಗಿ ತಿಳಿದುಕೊಳ್ಳದಿದ್ದರೆ ನನಗೆ ಅಗತ್ಯವಾದಂತಹ ಒಂದೇ ಒಂದು ವಸ್ತು ನಿಮ್ಮ ಹತ್ತಿರ ಇದೆ." ಎಂದು ಮುಂದೆ ಹೇಳದೆ ಸುಮ್ಮನಾದನು.

"ಅದೇನಪ್ಪಾ. ಕೇಳು, ನಿಃಶಂಕೆಯಿಂದ ಕೇಳು. ಕೊಟ್ಟುಬಿಡುತ್ತೇನೆ" ಎಂದನು ಪದ್ಮಪಾದ.

"ನಿಮ್ಮ ಹತ್ತಿರ ಮಹತ್ವವಾದೊಂದು ಚೀಲವಿದೆ ಯಲ್ಲವೆ? ಅಡಿಗೆ ಮಾಡುವ ಕಷ್ಟವೇನೂ ಇಲ್ಲ ದಂತೆ, ಸಕಲ ಪದಾರ್ಥಗಳೂ ಅದರೊಳಗಿನಿಂದ ಹೊರಡುತ್ತವೆ. ಅಂತಹ ವಸ್ತು ನನ್ನ ಹತ್ತಿರವಿದ್ದ ಪಕ್ಷದಲ್ಲಿ, ವೃದ್ಧಳಾದ ನನ್ನ ತಾಯಿಗೆ ದಿನಾ ಅಡಿಗೆ ಮಾಡಬೇಕಾದ ಕಷ್ಟ ತಪ್ಪಿ, ಬಹಳ ಸಂತೋಷ ಪಡುತ್ತಾಳೆ." ಎಂದನು ಪಿಂಗಳ.

"ಅದುವೋ! ಬಹಳ ಸಂತೋಷದಿಂದ ಕೊಡು ತ್ತೇನೆ," ಎಂದು ಹೇಳಿ ಪದ್ಮಪಾದನು ಆ ಚೀಲ ವನ್ನು ತಂದು ಪಿಂಗಳನಿಗೆ ಕೊಟ್ಟುಬಿಟ್ಟನು.

ಪಿಂಗಳನು ವೃದ್ಧ ಮಂತ್ರವೇತ್ತ ಗುರುವಿಗೂ, ಪದ್ಮಪಾದನಿಗೂ ನಮಸ್ಕಾರಮಾಡಿ, ಭಲ್ಲೂಕಕೇತುವಿನ ಹೆಗಲ ಮೇಲೇರಿ ಕುಳಿತನು. ಮತ್ತೆ ಅವನ ಪ್ರಯಾಣ ಆಕಾಶ ಮಾರ್ಗದಲ್ಲಿ ಸಾಗಿತು.

ದಟ್ಟವಾದ ಮೇಘಗಳಿಂದ ಮುಚ್ಚಲ್ಪಟ್ಟ ಆಕಾಶ ಭಾಗದೊಳಗೆ ಭಲ್ಲೂಕಕೇತು ತೂರಿಕೊಂಡು ಹಾರುತ್ತ, ಮಧ್ಯಾಹ್ನವಾಗುವ ಹೊತ್ತಿಗೆ ಅವಂತೀನಗರದ ಮೇರೆಯ ಹತ್ತಿರ ಹೋದನು. ಪಿಂಗಳನು ಆ ನಗರವನ್ನೂ, ಅದರ ಕೋಡಿಯಲ್ಲಿ ಕಾಣುವ ತನ್ನ ಗುಡಿಸಲು ಮನೆಯನ್ನೂ ನೋಡಿದನು. ಅದು ಕಣ್ಣಿಗೆ ಬಿದ್ದ ಕೂಡಲೇ ಅವನು ಭಲ್ಲೂಕ ಕೇತುವಿನ ಬೆನ್ನು ತಟ್ಟಿ, "ಭಲ್ಲೂಕಾ, ಇನ್ನು ಮುಂದೆ ಹೋಗ ಬೇಡ. ಅಲ್ಲಿ ಕಾಣುವ ಮರಗಳ ಮಧ್ಯದಲ್ಲಿ ಇಳಿಸಿ ಬಿಡು" ಎಂದನು ಆತುರದಿಂದ.

ಭಲ್ಲೂಕಕೇತು ಪಿಂಗಳನು ತೋರಿಸಿದ ಸ್ಥಳದಲ್ಲಿ, ಅವಂತಿನಗರದ ಮೇರೆಯಲ್ಲಿರುವ ಒಂದಾನೊಂದು ಮರಗಳ ತೋಪಿನಲ್ಲಿ ನೆಲಕ್ಕೆ ಇಳಿದನು.

ಪಿಂಗಳನು ಅವನ ಹೆಗಲಿನಿಂದ ನೆಲಕ್ಕಿಳಿದು, ನಗರದ ಕಡೆಗೆ ನೋಡಿ, "ಭಲ್ಲೂಕಾ, ನಿನ್ನನ್ನು ಈ ರೂಪದಲ್ಲಿ ನಗರದೊಳಗೆ ಕರೆದುಕೊಂಡು ಹೋಗುವು ದೆಂದರೆ, ಬಹಳ ಉಪದ್ರಗಳಿಗೆ ಕಾರಣವಾದೀತು. ಜನರೆಲ್ಲಾ ಹೆದರಿ ಮೂರ್ಛೆಬಿದ್ದಾರು. ನನ್ನ ತಾಯಿ ಯಂತೂ ನಿನ್ನನ್ನು ನೋಡಿದರೆ....ಅಬ್ಬಾ! ಬೇಡ! ಇದಕ್ಕೇನು ದಾರಿ ?" ಎಂದು ಕೇಳಿದನು.

ಪಿಂಗಳನ ತೊಳಲಾಟದ ಕಾರಣವನ್ನು ಊಹಿಸಿ ಕೊಂಡ ಭಲ್ಲೂಕ ಕೇತು ನೆಗಾಡಿ, "ಪ್ರಭೂ ! ಚಿಂತಿಸ ಬೇಡಿ. ನೀವು ಒಬ್ಬರೇ ನಗರದೊಳಗೆ ಹೋಗಿರಿ. ನನ್ನ ಸಹಾಯ ಬೇಕಾದಾಗ ನನ್ನ ಮರ್ಮ ಮಂತ್ರ ಪಠಿಸಿರಿ. ಕೂಡಲೇ ನಾನು ನಿಮ್ಮ ಸಾನ್ನಿಧ್ಯದಲ್ಲಿರು ತ್ತೇನೆ" ಎಂದು ಅವನ ಕಿವಿಯಲ್ಲಿ ಅದೇನೋ ತನ್ನ ಮರ್ಮ ಮಂತ್ರವನ್ನು ಉಪದೇಶಮಾಡಿ, ಅದೃಶ್ಯನಾದನು.

ಪಿಂಗಳನು ಪದ್ಮಪಾದನು ಕೊಟ್ಟ ಧನರಾಶಿಯ ಮೂಟೆಯನ್ನು ಹೊತ್ತುಕೊಂಡು ತನ್ನ ಮನೆಯಕಡೆಗೆ ನಡೆದನು. ಅವನು ಮನೆಯ ಹತ್ತಿರ ಹೋದಾಗ, ಸೊರಗಿ ಕಡ್ಡಿಯಾಗಿದ್ದ ಅವನ ತಾಯಿ, ಬಾಗಿಲಹತ್ತಿರ ಕುಳಿತುಕೊಂಡು, ಶುಷ್ಕನೀರಸ ಕಂಠದಿಂದ "ಅಯ್ಯಾ! ಧರ್ಮದಾತರೇ ! ಈ ಮುದುಕಿಗೆ ಏನಾದರೂ ಧರ್ಮಮಾಡಿರಪ್ಪಾ ! ಹಸಿವೆ ತಾಳಲಾರೆನಯ್ಯಾ ! ಯಾರೂ ದಿಕ್ಕಿಲ್ಲದವಳು" ಎಂದು ದೀನಾತಿದೀನತೆ ಯಿಂದ ಕೈಚಾಚಿ ಬೇಡಿಕೊಂಡಿರುವುದು ಅವನ ಕಣ್ಣಿಗೆ ಬಿತ್ತು.

ಪಿಂಗಳನು ಆ ದಾರುಣ ದೃಶ್ಯ ನೋಡಿ ಶರೀ ರಾದ್ಯಂತ ನಡುಗುತ್ತ, ದುಃಖವನ್ನು ತಾಳಲಾಗದೆ, ಬೀಳದಂತೆ ಸಮಾಳಿಸಿಕೊಂಡು "ಅಮ್ಮಾ, ಏನಿದೂ? ನಿನಗೆ ಇಂಥಾ ಕೆಟ್ಟ ಗತಿ ಹೇಗೆ ಬಂತು ?" ಎಂದು ತಾಯಿಯ ಕಡೆಗೆ ಆತುರದಿಂದ ಓಡಿದನು.

—(ಇನ್ನೂ ಇದೆ)

